




# ಸಪ್ತಗಿರಿ

ಕನ್ನಡ, ತೆಲುಗು, ತಮಿಳು, ಇಂಗ್ಲೀಷ್,
ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

ಸಂಪುಟ 12] ಆಗಸ್ಟ್ 1981 [ಸಂಚಿಕೆ 3

ಗೌರವ ಸಂಪಾದಕರು;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ಟೆಲಿಫೋನ್ ನಂಬರು: 2254

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ
ಮೇನೇಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು: 2340

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.



## ವಿಷಯಸೂಚಿ

ಬೆಂಗಳೂರಿನ ತಿ. ತಿ. ದೇ ವಾರ್ತಾ ಕೇಂದ್ರ

# ರಜತ ಮಹೋತ್ಸವ

## ವಾರ್ತಾಲಹರಿ

ಬೆಂಗಳೂರಿನಲ್ಲಿ ತಿರುಮಲೆ-ತಿರುಪತಿ ದೇವಸ್ಥಾನಗಳ ವಾರ್ತಾಕೇಂದ್ರಕ್ಕೆ ಈಚೆಗೆ 25 ವರ್ಷ ತುಂಬಿ ಈ ಶುಭಸಂದರ್ಭವನ್ನು ಚಿರಸ್ಮರಣೀಯಗೊಳಿಸಲು ಕೇಂದ್ರದ ಆಶ್ರಯದಲ್ಲಿ ನಡೆಯುತ್ತಿರುವ ತಿ. ತಿ. ದೇ. ಕಲ್ಯಾಣಮಂಟಪದಲ್ಲಿ ಒಂದು ಸುಂದರ ಸಮಾರಂಭವನ್ನು ಏರ್ಪಡಿಸಲಾಗಿದ್ದಿತು.

ಜೂನ್ 9 ರಂದು ಸಂಜೆ ಕರ್ನಾಟಕ ಸರಕಾರದ ಮುಖ್ಯಕಾರ್ಯದರ್ಶಿ ಶ್ರೀ ಎನ್. ನರಸಿಂಹರಾವ್ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಕರ್ನಾಟಕದ ರಾಜ್ಯಪಾಲ ಶ್ರೀ ಗೋವಿಂದ ನಾರಾಯಣ ದಂಪತಿಗಳೂ, ಶ್ರೀ ಶ್ರೀ ಶಿವ ರಾತ್ರಿ ರಾಜೇಂದ್ರ ಸ್ವಾಮಿಗಳೂ ಭಾಗವಹಿಸಿದ್ದರು.

ತಿ. ತಿ. ದೇವಸ್ಥಾನಗಳ ಪರವಾಗಿ ಮಾತನಾಡಿದ ಕಾರ್ಯನಿರ್ವಹಣಾಧಿಕಾರಿ ಪಿ. ವಿ. ಆರ್. ಕೆ. ಪ್ರಸಾದರು ಹಿಂದೂ ಧರ್ಮದ ಐಕ್ಯತೆಗಾಗಿ ಕೆಲಸ ಮಾಡುತ್ತಿರುವ ದೇವಸ್ಥಾನಗಳಿಗೆ ಎಲ್ಲರ ಸಹಕಾರವೂ ಅಗತ್ಯವೆಂದು ಹೇಳುತ್ತ, ತಿ. ತಿ. ದೇವಸ್ಥಾನಗಳ ಎಲ್ಲ ಕಾರ್ಯಕ್ರಮಗಳಲ್ಲೂ ಕ್ರಿಯಾಶೀಲವಾಗಿ ಉತ್ಸಾಹದಿಂದ ಭಾಗವಹಿಸುತ್ತಿರುವ ಕನ್ನಡಿಗರು ಶ್ರೀ ವೆಂಕಟೇಶ್ವರಸ್ವಾಮಿಯ ಪ್ರಥಮಾಶೀರ್ವಾದಕ್ಕೆ ಅರ್ಹರೆಂದು ಹೇಳಿದರು.

ರಾಜ್ಯಪಾಲ ಗೋವಿಂದ ನಾರಾಯಣರು ಮಾತನಾಡುತ್ತ ಭಾರತೀಯ ಸಂವಿಧಾನದಲ್ಲಿನ ಜಾತ್ಯತೀತತೆಗೆ ನಿರ್ಜಾತಿ ಎಂದು ಅರ್ಥವಲ್ಲವೆಂದೂ ಜಾತೀಯ ಸಮಾನತೆಯ ಆಧಾರದಿಂದ ಉಂಟಾದದ್ದು ಅದೆಂದೂ ಹೇಳುತ್ತ, ಇಡೀ ಭಾರತದಲ್ಲಿ ಎಲ್ಲರಿಂದಲೂ ಪೂಜಿತನಾಗಿರುವ ಶ್ರೀ ವೆಂಕಟೇಶ್ವರ ಸ್ವಾಮಿಯ ಈ ವಾರ್ತಾಕೇಂದ್ರದ ರಜತ ಮಹೋತ್ಸವದಲ್ಲಿ ಭಾಗವಹಿಸುವುದು ತಮಗೆ ಹಾಗೂ ತಮ್ಮ ಕುಟುಂಬಕ್ಕೆ ಸಂತಸದಾಯಕ ವಿಷಯವಾಗಿದೆ ಎಂದೂ, ತಿ. ತಿ. ದೇವಸ್ಥಾನಗಳ ಮಾನವಸೇವಾ ಯೋಜನೆಗಳಾದ ಆಸ್ಪತ್ರೆ, ಅನಾಥಾಲಯ, ಶಾಲಾಕಾಲೇಜುಗಳು ಎಲ್ಲರಿಂದಲೂ ಅನುಸರಿಸಲ್ಪಡಬೇಕಾದ ಆದರ್ಶಯೋಜನೆಗಳಾಗಿವೆ ಎಂದೂ ನುಡಿದರು.

ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರು ಮಾತನಾಡುತ್ತ ಸನಾತನ ಧರ್ಮದ ಸಿದ್ಧಾಂತ ತತ್ತ್ವಗಳು ಇಡೀ ಮಾನವ ಕುಲಕ್ಕೆ ದಾರಿದೀಪವಾಗಿರುವುದರಿಂದ ಅದನ್ನು ಪ್ರಸರಿಸಲು ಕಾರ್ಯ ಮಾಡುತ್ತಿರುವ ತಿ. ತಿ. ದೇವಸ್ಥಾನಗಳ ಪ್ರಯತ್ನಕ್ಕೆ ಎಲ್ಲರ ಪ್ರೋತ್ಸಾಹ ದೊರೆಯಬೇಕೆಂದು ಕರೆನೀಡಿದರು.

ಸಭೆಯ ಅಧ್ಯಕ್ಷರಾಗಿ ಮಾತನಾಡಿದ ಶ್ರೀ ನರಸಿಂಹರಾವ್ ಅವರು ತಿ. ತಿ. ದೇ. ವಾರ್ತಾಕೇಂದ್ರದ ಸಲಹಾಸಮಿತಿಯ ಅಧ್ಯಕ್ಷ ಶ್ರೀ ವಿ. ಆರ್. ನಾಯುಡು ಅವರು ಕೇಂದ್ರದ ವಿಸ್ತರಣೆಯ ವಿಷಯದಲ್ಲಿ ಮುಂಡಿಸಿದ ಬೇಡಿಕೆಗಳನ್ನು ಈಡೇರಿಸಲು ತಮ್ಮ ಕೈಲಾದಷ್ಟು ನೆರವನ್ನು ನೀಡುವುದಾಗಿ ಭರವಸೆ ನೀಡಿದರು.

ಶ್ರೀಮತಿ ಚಂದ್ರಾ ಗೋವಿಂದ ನಾರಾಯಣ ಅವರು ಕೇಂದ್ರದ ಸುಪ್ರಭಾತ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನ ವಿತರಣೆ ಮಾಡಿದರು.

ತಿ. ತಿ. ದೇವಸ್ಥಾನಗಳ ಪರವಾಗಿ ರಾಜ್ಯಪಾಲರು ಕೇಂದ್ರದ ಸ್ಥಾಪಕ ಸದಸ್ಯರನ್ನು-ದೀನಬಂಧು ವಿ. ಆರ್. ನಾಯುಡು. ಎಸ್. ಆರ್. ಶ್ರೀನಿವಾಸನ್, ಎಸ್. ಆರ್. ಚಂದ್ರಶೇಖರ್ - ಅವರುಗಳನ್ನು ಸನ್ಮಾನಿಸಿದರು.

ದೀನಬಂಧು ವಿ. ಆರ್. ನಾಯುಡು ಅವರು ಸ್ವಾಗತಿಸಿದ ಸಭೆಯನ್ನು ಓ. ಜಿ. ರಾಜುಲು ಅವರು ವಂದಿಸಿದರು.



ಕುಳಿತಿರುವರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳು, ಶ್ರೀ ಗೋವಿಂದನಾರಾಯಣ, ಶ್ರೀಮತಿ ಚಂದ್ರಾ ಗೋವಿಂದನಾರಾಯಣ, ಶ್ರೀ ಎನ್. ನರಸಿಂಹರಾವ್, ಮಾತನಾಡುತ್ತ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್.

# ನರಸಿಂಹ ತೀರ್ಥದಲ್ಲಿ
## ಶ್ರೀಪಾದರಾಜರ
## ಆರಾಧನೆ

ಶ್ರೀಪಾದರಾಜರ ವೃಂದಾವನ
ಚಿತ್ರ : ಕೆ. ಪಿ. ಆರ್.

1980 ರಂತೆಯೇ ಈ ವರ್ಷವೂ ಮುಳಬಾಗಿಲಿನ ನೃಸಿಂಹತೀರ್ಥದಲ್ಲಿ ದಾಸ ಸಾಹಿತ್ಯ ಪ್ರಾಜೆಕ್ಟ್ ಶ್ರೀಪಾದರಾಜರ ಆರಾಧನೆಯನ್ನು ಯಶಸ್ವಿಯಾಗಿ ನಡೆಸಿತು.

ದಿನಾಂಕ 15 ಜೂನ್ ರಂದು ಬೆಳಗ್ಗೆ ಸಾಮೂಹಿಕ ಭಜನಗೋಷ್ಠಿಯಿಂದ ಆರಂಭವಾದ ಆರಾಧನಾ ಮಹೋತ್ಸವ ಜೂನ್ 16 ರ ರಂದು ರಾತ್ರಿ ಸಂಗೀತದೊಡನೆ ಮುಕ್ತಾಯವಾಯಿತು.

ಶ್ರೀಗುರು ಜಗನ್ನಾಥ ಸೇವಾಸಮಿತಿಯ (ಕೌತಾಳ) ವರು ಶ್ರೀ ನಾಗಪ್ಪ ಅವರ ನೇತೃತ್ವದಲ್ಲಿ ಆರಂಭಿಸಿದ ಭಜನಗೊಷ್ಠಿ,



ಪುರಂದರ ದಾಸರ ಪಾತ್ರದಲ್ಲಿ
ಶ್ರೀ ಎಸ್. ವಿ. ರಂಗಭಟ್ಟರ್.

ದಾಸಸಾಹಿತ್ಯ ಪ್ರಾಜೆಕ್ಟಿನ ಕೆ. ಅಪ್ಪಣ್ಣಾಚಾರ್ಯ, ವಾದಿರಾಜ ಇವರ ನೇತೃತ್ವದಲ್ಲಿ ಮುಂದುವರೆದು ಭಕ್ತಿಯ ಲಹರಿಯಲ್ಲಿ ನೃಸಿಂಹತೀರ್ಥದ ಆಸ್ತಿಕರು ಓಲಾಡುತ್ತಿರುವಂತೆ ಷೇಡ ಕೃಷ್ಣಾಚಾರ್ಯರು ಹರಿದಾಸ ಸಾಹಿತ್ಯದಲ್ಲಿ ಶ್ರೀಕೃಷ್ಣ ಲೀಲೆಗಳು ಎಂಬ ವಿಷಯದಲ್ಲಿ ಘನವಾದ ಉಪನ್ಯಾಸ ನೀಡಿದರು.

ಸಂಜೆ ಮುಂದುವರೆದ ಉಪನ್ಯಾಸ ಎಲ್ಲರಿಂದಲೂ ಮೆಚ್ಚುಗೆ ಪಡೆಯಿತು. ಶ್ರೀ ವೆಂಕಟೇಶ್ವರ ಪ್ರಾಚ್ಯ ಕಲಾಶಾಲೆಯ ಅಧ್ಯಾಪಕ ಎಸ್. ವಿ. ರಂಗಭಟ್ಟರ್ ಅವರು ನೀಡಿದ 'ಪುರಂದರದಾಸರು' ಏಕಪಾತ್ರಾಭಿನಯ ಪ್ರೇಕ್ಷಕರ ಮನವನ್ನು ಆನಂದದಿಂದ ಶತಮಾನಗಳ ಹಿಂದಕ್ಕೆ ಒಯ್ದಿತು. ನಂತರ ಶಿವಮೊಗ್ಗದ ಶ್ರೀನಿವಾಸದಾಸರ ಹರಿಕಥೆಯಿಂದ ಅಂದಿನ ಕಾರ್ಯಕ್ರಮ ಒಂದು ಘಟ್ಟಕ್ಕೆ ಬಂದಿತು.

ಜೂನ್ 16 ರಂದು ಬೆಳಗ್ಗೆ ಬೆಂಗಳೂರಿನ ಅಂಬಾ ಭಜನಮಂಡಳಿಯವರ ಸಾಮೂಹಿಕ ಭಜನಗೋಷ್ಠಿಯ ನಂತರ ಜಯತೀರ್ಥಾಚಾರ್ಯರು ಜಗನ್ನಾಥದಾಸರ 'ಹರಿಕಥಾಮೃತಸಾರದ' ಬಗ್ಗೆ ಶ್ರೇಷ್ಠ ಉಪನ್ಯಾಸ ನೀಡಿದರು. ನಂತರ ಶ್ರೀಪಾದರಾಜ ಮಠದ ಶ್ರೀ ಶ್ರೀ ವಿಜಯನಿಧಿತೀರ್ಥರ ನೇತೃತ್ವದಲ್ಲಿ ರಥೋತ್ಸವ. 'ಭಕ್ತಜನ ಮುಂದೆ ನೀನವರ



ಶ್ರೀ ಯೋಗ ನರಸಿಂಹಸ್ವಾಮಿ
ಚಿತ್ರ ; ಕೆ. ಪಿ. ಆರ್.

ಹಿಂದೆ' ಎಂಬಂತೆ ಮುಂದೆ ಭಾಗವತ ಸಂದೋಹ ಆನಂದದಿಂದ ಹಾಡುತ್ತ ಬರುತ್ತಿರಲು 'ತೇರು ತೆರಳಿತು ಭಕ್ತ ಹೃದಯಕ್ಕೆ'.

ಸಂಜೆ ಜಯತೀರ್ಥಾಚಾರ್ಯರ ಉಪನ್ಯಾಸ ಮುಂದುವರೆಯಿತು. ನಂತರ ಶ್ರೀ ವೆಂಕಟೇಶ್ವರ ಕಲಾಪೀಠದ ಎಂ. ಎಸ್. ಬಾಲಸುಬ್ರಹ್ಮಣ್ಯಶರ್ಮ ಮತ್ತು ವೃಂದದವರಿಂದ ಅಮೋಘ ಸಂಗೀತ. ಆ ಮೇಲೆ ಭದ್ರಗಿರಿ ಅಚ್ಯುತದಾಸರಿಂದ ಹರಿಕಥೆ.

ಹರಿದಾಸ ಸಾಹಿತ್ಯ ಸುಗಂಧದ ಹರಡುವಿಕೆಗೆ ಈ ಆರಾಧನಾ ಕಾರ್ಯಕ್ರಮ ಸಹಕಾರಿಯಾಯಿತೆನ್ನಲಾಗಿದೆ.

(37ನೇ ಪುಟವನ್ನೂ ನೋಡಿ)

ಈ ತಿಂಗಳು ಪ್ರಕಟವಾಗಬೇಕಾಗಿದ್ದ "ಗುರುತಿಸಿ – ಬರೆಯಿರಿ" ಶೀರ್ಷಿಕೆಯನ್ನು ಸ್ಥಳಾಭಾವದ ಪ್ರಯುಕ್ತ ಸೆಪ್ಟೆಂಬರ್ 1981 ಸಂಚಿಯಲ್ಲಿ ಪ್ರಕಟಿಸಲಾಗುವುದು - ಸಂ||

# ಶ್ರೀ ರಾಘವೇಂದ್ರರ ಮಹಿಮೆ

ವಾಯುದೇವರು, "ರೂಪಾಂತರೇಣ ಮಮ ಸದ್ಗುಣ ನಿರ್ಣಯೇನ" ಎಂಬ ಶ್ರೀಹರಿಯ ಆಜ್ಞೆಯನ್ನು ಶಿರಸಾವಹಿಸಿ ಮಧ್ವಾವತಾರದಿಂದ ತತ್ತ್ವವಾದವನ್ನು ಭರತ ಭೂಮಿಯಲ್ಲಿ ಪ್ರಸಾರ ಮಾಡಲು. ಅನೇಕ ದೇವತೆಗಳು ಶ್ರೀ ಮಧ್ವರ ತತ್ತ್ವವಾದ ಪ್ರಸಾರದ ಕಾರ್ಯದಲ್ಲಿ ಪಾಲ್ಗೊಂಡು ಪುನೀತರಾಗಬೇಕೆಂದು ಭೂಮಿಯಲ್ಲಿ ಅವತರಿಸಿದರು. ಅಂತಹ ದೇವತೆಗಳಲ್ಲಿ ಅಗಮ್ಯ ಮಹಿಮರಾದ ಶ್ರೀಮನ್ಮಂತ್ರಾಲಯ ಪ್ರಭುಗಳೂ ಒಬ್ಬರು.

ಶ್ರೀಗುರುರಾಜರು ಆಚಾರ್ಯ ಮಧ್ವರ ಗ್ರಂಥಗಳಿಗೆ ಟೀಕೆ. ಟಿಪ್ಪಣಿಗಳನ್ನು ಬರೆದಿರುವುದೇ ಅವರು ದೇವತೆಗಳೆಂಬುದಕ್ಕೆ ಪ್ರಬಲ ಪ್ರಮಾಣ, ಏಕೆಂದರೆ ಶ್ರೀಮನ್ನ್ಯಾಯಸುಧಾಕಾರರು ತಿಳಿಸಿರುವಂತೆ ಆಚಾರ್ಯ ಮಧ್ವರ ಗ್ರಂಥಗಳಿಗೆ ಟೀಕೆಗಳನ್ನು ಬರೆಯಲು ದೇವತೆಗಳೇ ಅಧಿಕಾರಿಗಳು. (" ಶ್ರೀಮದಾನಂದತೀರ್ಥಭಗವದ್ವಚಸಾಂ ವಿಶಿಷ್ಟ ವ್ಯಾಖ್ಯಾನ ಕರ್ಮಣಿ ಸುರಾಹಿ ಅಧಿಕಾರಿಣೋತ್ರ") ಅಲ್ಲದೆ ಗುರುರಾಜರಿಂದಲೇ 'ಸಾಕ್ಷೀ ಹಯಾಸ್ಯೋತ್ರಹಿ' ಎಂಬ ಒಪ್ಪಿಗೆಯ ಮುದ್ರಿಕೆಯನ್ನು ಪಡೆದ ಅಪ್ಪಣಾಚಾರ್ಯಕೃತ ಗುರುಸೋತ್ರದಲ್ಲಿ ಶ್ರೀ ಗುರುರಾಜರನ್ನು "ದೇವಸ್ವಭಾವೋ ದಿವಿಜದ್ರುಮೋಯಂ" ಎಂದು ವರ್ಣಿಸಲಾಗಿದೆ. ಅಲ್ಲದೆ ಶ್ರೀ ವಿಜಯದಾಸಾದಿ ಜ್ಞಾನಿವರೇಣ್ಯರು ರಾಯರನ್ನು 'ದೇವಾಂಶರು' 'ದೇವತೆಗಳಿವರಿದಕೆ ಸಂದೇಹವಿಲ್ಲ' ಎಂಬುದಾಗಿ ಕೊಂಡಾಡಿದ್ದಾರೆ.

## ಶ್ರೀ ಗುರುರಾಜರ ಅಂಶಾವತಾರ

ಶ್ರೀ ಗುರುರಾಜರ ಜೀವನ ವೃತ್ತಾಂತವನ್ನು ನಿರೂಪಿಸುವ ಗ್ರಂಥಗಳಾದ 'ಶ್ರೀ ರಾಘವೇಂದ್ರ ವಿಜಯ' 'ಗುರುಗುಣಸ್ತವನ' ಮತ್ತು 'ರಾಘವೇಂದ್ರ ಸ್ತೋತ್ರ'ಗಳಲ್ಲಿ ರಾಯರ ಅಂಶಾವತಾರವು ತಿಳಿಸಲ್ಪಟ್ಟಿಲ್ಲ. ಆದರೆ ಅಪರೋಕ್ಷ ಜ್ಞಾನಿಗಳಾದ ದಾಸರಾಯರುಗಳು ಗುರುಗಳಲ್ಲಿ ತಮಗಿರುವ ಪರಮ ಭಕ್ತಿಯ ಭಾವುಕತೆಯಲ್ಲಿ ಗುರುಗಳ ಅಂಶಾವತಾರವನ್ನು ಪ್ರಕಟಿಸಿದ್ದಾರೆ. ಶ್ರೀ ವಿಜಯದಾಸರು 'ನೋಡಿದೆ ಗುರುಗಳ ನೋಡಿದೆ' ಎಂಬೊಂದು ಕೃತಿಯಲ್ಲಿ

"ಪ್ರಹ್ಲಾದನೆ ವ್ಯಾಸಮುನಿ ರಾಘವೇಂದ್ರರು
ಅಹುದೆಂದು ಭಜಿಸಿರೋ ವಿಜಯ ವಿಠಲನಿಂದ"

ಎಂದು ಸಾರಿದರೆ,

ಶ್ರೀ ಗೋಪಾಲದಾಸರು "ರಥವನೇರಿದ ರಾಘವೇಂದ್ರ" ಎಂಬ ಹಾಡಿನಲ್ಲಿ;

**ಶ್ರೀ ತಟ್ಟಿ ವೆಂಕೋಬರಾವ್,**
ಎಂ.ಎ., ಬಿ.ಎಸ್ಸಿ,

"ಪ್ರಥಮ ಪ್ರಹ್ಲಾದ ವ್ಯಾಸಮುನಿಯೆ ರಾಘವೇಂದ್ರ ಯತಿಯೆ" ಎಂದು ಕೊಂಡಾಡಿದ್ದಾರೆ. ಇದೇ ರೀತಿಯಾಗಿ ಜಗನ್ನಾಥ ದಾಸರು, ಅಭಿನವ ಜನಾರ್ದನ ವಿಠಲರು ಮುಂತಾದ ಜ್ಞಾನಿಗಳು ರಾಘವೇಂದ್ರರು, ಪ್ರಹ್ಲಾದ ಮತ್ತು ವ್ಯಾಸರಾಯರ ಅವತಾರ ರೂಪರೆಂದು ಸ್ತುತಿಸಿದ್ದಾರೆ.

ರಾಘವೇಂದ್ರ ತೀರ್ಥರು ಸ್ವೀಕರಿಸಿರುವುದು ಹರಿಸರ್ವೋತ್ತಮತ್ವ ವಾಯು ಜೀವೋತ್ತಮತ್ವ, ಪಂಚಭೇದ ತಾರತಮ್ಯಗಳನ್ನು ಪ್ರತಿಪಾದನೆ ಮಾಡುವ ಆಚಾರ್ಯ ಮಧ್ವರ 'ತತ್ತ್ವವಾದ'ವನ್ನು. ಈ ತತ್ತ್ವವಾದದ ಪ್ರಸಾರ ಕಾರ್ಯದಲ್ಲಿ ರಾಘವೇಂದ್ರಸ್ವಾಮಿಗಳವರದು ಬಹು ಮುಖ್ಯವಾದ ಪಾತ್ರ. ತಮ್ಮ ಅಮೂಲ್ಯವಾದ ಗ್ರಂಥಗಳಿಂದ ಮಧ್ವಸಿದ್ಧಾಂತವನ್ನು ಹರಡಿದವರು ಗುರುರಾಜರು. ಆದುದರಿಂದ ವೇದವ್ಯಾಸರಿಂದ ಬಿತ್ತಲ್ಪಟ್ಟ ತತ್ತ್ವವಾದದ ಬೀಜಗಳು ಗುರುರಾಜರ ಕಾಲದಲ್ಲಿ ಮಧ್ವಸಿದ್ಧಾಂತ ವೃಕ್ಷವಾಗಿ, ಫಲಗಳನ್ನು ಕೊಟ್ಟಿತೆಂದು ವರ್ಣಿತವಾಗಿದೆ. ("ಅಸ್ಯ ಶ್ರೀರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತ ಶಾಖೀ") ಆದುದರಿಂದಲೇ ಅಪ್ಪಣಾಚಾರ್ಯರು ಗುರುಗಳನ್ನು "ಶ್ರೀಮಧ್ವಮತ ವರ್ಧನಃ" "ಶ್ರೀ ಮಧ್ವಮತ ದುಗ್ಧಾಬ್ಧಿ ಚಂದಿರ" ಮುಂತಾಗಿ ವರ್ಣಿಸಿದ್ದಾರೆ. ಇದನ್ನೆ ಶ್ರೀ ಗೋಪಾಲ ದಾಸರು

"ಗುರುಮಧ್ವಮತವೆಂಬ ವರಕ್ಷೀರಾಂಬುಧಿಯಲ್ಲಿ ।
ಹರಧರಿಸಿದ ಶಶಿಯಂತುದಿಸಿ ॥
ಪರಮತತಿಮಿರಕ್ಕೆ ತರಣಿ ಕಿರಣವೆನಿಸಿ ।
ಪಿರಿದು ಮೆರೆದ ಸೀತಾರಾಮಾರ್ಚಕರಾದ "॥

ಎಂಬುದಾಗಿ ಕೀರ್ತಿಸಿದ್ದಾರೆ.

ಗುರುರಾಜರ ಕಾಣಿಕೆ ಅಪಾರ. ತರ್ಕ, ವ್ಯಾಕರಣ, ಮೀಮಾಂಸಾ ಶಾಸ್ತ್ರಗಳಲ್ಲಿ ತಮಗಿದ್ದ ಅಗಾಧವಾದ ಪಾಂಡಿತ್ಯವನ್ನೆಲ್ಲ ಉಪಯೋಗಿಸಿ 'ತತ್ತ್ವಮಂಜರಿ', 'ತಂತ್ರ ದೀಪಿಕಾ' ಮತ್ತು ಉಪನಿಷತ್ತುಗಳಿಗೆ ಖಂಡಾರ್ಥಗಳೆಂಬುವ ಗ್ರಂಥಗಳನ್ನು ರಚಿಸಿ ದ್ವೈತಮತದ ಪ್ರಮೇಯಗಳನ್ನು ಪುಷ್ಟೀಕರಿಸಿದ್ದಾರೆ. ಇವರ ಮೇರು ಕೃತಿ 'ಪರಿಮಳ'. ಇದು 'ಶ್ರೀಮನ್ನ್ಯಾಯಸುಧಾ'ಕ್ಕೆ ವ್ಯಾಖ್ಯಾನ, ಶ್ರೀ ಸುಧಾಗ್ರಂಥದಲ್ಲಿ ಪ್ರತಿಪದವೂ, ಪ್ರತಿ ಅಕ್ಷರವೂ ಅನೇಕ ಅರ್ಥಗಳನ್ನು ಕೊಡುತ್ತವೆ! (ಪ್ರತ್ಯಕ್ಷರಂ ಪ್ರತಿಪದಂ ಅನೇಕಾಕೂತ ಗರ್ಭಿತ) ಎಂಬುದಾಗಿ ಶ್ರೀ ಸುಧಾಗ್ರಂಥದ ಹಿರಿಮೆಯನ್ನು ಕೊಂಡಾಡಿದ್ದಾರೆ. ಅಲ್ಲದೆ ತಮ್ಮ 'ತತ್ತ್ವ ಪ್ರಕಾಶಿಕಾ' ಟಿಪ್ಪಣಿಯಲ್ಲಿ ಕೆಲವರು ಮಧ್ವಭಾಷ್ಯದ ಮೇಲೆ ಹೊಸದಾಗಿ ಎತ್ತಿದ ವಿವಿಧ ಆಕ್ಷೇಪಗಳನ್ನು ಖಂಡಿಸಿದ್ದಾರೆ. (ನೂತನೋ ರೂಹಿತಾ ಯೇತು

ದೋಷಾಸ್ತೇಷಾಂ ಅಲಗ್ನತಾಂ) ಹೀಗೆ ಟೀಕಾ ಟಿಪ್ಪಣಿಗಳಲ್ಲದೆ ಕೆಲವು ಸ್ವತಂತ್ರ ಪ್ರೌಢ ಪ್ರಬಂಧಗಳನ್ನು ರಚಿಸಿದ್ದಾರೆ. ಅಂತೆಯೇ ಶ್ರೀ ವಾದೀಂದ್ರ ತೀರ್ಥರು ತಮ್ಮ ಗುರುಗುಣ ಸ್ತುತಿಯಲ್ಲಿ "ಪ್ರೌಢಾನೇಕ ಪ್ರಬಂಧ ಪ್ರವಚನ ರಚನಾಲಬ್ಧ ವಿಸ್ರಬ್ಧ ಕೀರ್ತಿಃ" ಎಂದು ಉದ್ಗರಿಸಿದ್ದಾರೆ. ಶ್ರೀ ಗುರುರಾಜರು ಶಾಸ್ತ್ರದ ಜೊತೆಗೆ ಅಲಂಕಾರ ಕಾವ್ಯ, ನಾಟಕ ಸಂಗೀತ ಮೊದಲಾದುವುಗಳಲ್ಲಿಯೂ ಪ್ರತಿಭಾಸ್ವಿತರಿದ್ದರು ಎಂಬುದಾಗಿ ಅಪ್ಪಣಾಚಾರ್ಯರು,

"ಸಾಲಂಕಾರಕ ಕಾವ್ಯ ನಾಟಕ
ಕಲಾಕಾಣಾದ ಪಾತಂಜಲ
ತ್ರೈಯರ್ಥ ಸ್ಮೃತಿ ಜೈಮಿನೀಯ
ಕವಿತಾ ಸಂಗೀತ ಪಾರಂಗತಃ"

ಎಂಬ ಮಾತುಗಳಿಂದ ತಿಳಿಸಿದ್ದಾರೆ. ಹೀಗೆ ರಾಯರು ಸುಮಾರು 50ಕ್ಕೂ ಹೆಚ್ಚು ಕೃತಿಗಳಿಂದ ದ್ವೈತವೇದಾಂತ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಆದುದರಿಂದಲೇ ಶ್ರೀಮದಾನಂದತೀರ್ಥರು ತಮ್ಮ ಸಿದ್ಧಾಂತ ಪ್ರತಿಷ್ಠಾಪನೆಯಲ್ಲಿ ಸಮರ್ಥರಾದ ಶ್ರೀರಾಘವೇಂದ್ರ ತೀರ್ಥರನ್ನು ನೋಡಿ ತಾವು ಶ್ರೀವೇದವ್ಯಾಸರ ಸನ್ನಿಧಿಯಲ್ಲಿ ನಿಶ್ಚಿಂತರಾಗಿದ್ದಾರಂತೆ.

"ಗುರುರಾಡ್ಯಃ ಸ್ವಸಿದ್ಧಾಂತ
ಪ್ರತಿಷ್ಠಾಪನ ಪಂಡಿತಮ್
ಶ್ರುತ್ವಾಯಂ ವ್ಯಾಸನಿಕಟೇ
ನಿಶ್ಚಿಂತ ಇವ ವರ್ತತೇ"

ಶ್ರೀಗುರುರಾಜರು ಪ್ರಕಾಂಡ ಪಂಡಿತರಿದ್ದು, ಅನೇಕ ಪ್ರೌಢಗ್ರಂಥಗಳನ್ನು ರಚಿಸಿದ್ದರೂ ಅವರ ವಿನಯಶೀಲತೆ ಅವರ ಪಾಂಡಿತ್ಯಕ್ಕೆ ಮೆರುಗು ಕೊಡುವಂತಹುದು. ಟೀಕಾ ಗ್ರಂಥಗಳ ಗಾಂಭೀರ್ಯವನ್ನು ವರ್ಣಿಸಲು 'ತಾವು ಕೇವಲ ಅಸಮರ್ಥರು. ಶ್ರೀಚಂದ್ರಿಕಾಚಾರ್ಯರು ಮಾತ್ರ ಟೀಕಾಕೃತ್ಪಾದರ ಗ್ರಂಥಗಾಂಭೀರ್ಯವನ್ನು ಅರ್ಥಮಾಡಿಕೊಳ್ಳಬಲ್ಲರು ಎಂಬುದಾಗಿ' ಬರೆಯುತ್ತಾರೆ. ("ಟೀಕಾ ಗಾಂಭೀರ್ಯಮುದ್ಧರ್ತುಂ ವ್ಯಾಸತೀರ್ಥಾದಯಕ್ಷಮಾಃ")

ಶ್ರೀಗುರುರಾಜರು ಪ್ರಕಟಪಡಿಸಿರುವ ಮತ್ತು ಈಗಲೂ ಬೃಂದಾವನದಲ್ಲಿ ಇದ್ದು ಪ್ರಕಟ ಪಡಿಸುತ್ತಿರುವ ಮಹಾತ್ಮೆಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಒಂದು ವೈಶಿಷ್ಟ್ಯವು ಕಂಡುಬರುವುದು ಗೊತ್ತಾಗುತ್ತದೆ. ನಾನಾ ವಿಧವಾದ ಸಾಂಸಾರಿಕ ಕ್ಲೇಶಗಳಿಂದ ಬಳಲಿ ಬರುವ ಭಕ್ತವೃಂದಕ್ಕೆ ಕಾಮಧೇನು, ಕಲ್ಪವೃಕ್ಷದಂತೆ ಶ್ರೀಗುರುರಾಜರಿದ್ದು ಅವರ ದುಃಖವನ್ನು ತಮ್ಮ ಅಭಯಹಸ್ತದಿಂದ ಪರಿಹರಿಸುತ್ತ, ನೊಂದ ಜೀವಿಗಳಿಗೆ ಸಾಂತ್ವನ ನೀಡುತ್ತ,

" ನಾನಾಜನಸ್ಯ ಶುಶ್ರೂಷಾ
ಕರ್ಮಾಖ್ಯಾ ಕರವನ್ಮಿತೇ
"ತಸ್ಯ ಪ್ರಾಣ್ಯುಪಕಾರೇಣ
ಪ್ರೀತೋಭವತಿ ಕೇಶವಃ"

ಎಂಬ ಆಚಾರ್ಯ ಮಧ್ವರ ಮಾತುಗಳನ್ನು ಅಕ್ಷರಶಃ ಪಾಲಿಸುತ್ತಿದ್ದಾರೆ ಎಂಬುದು ತಿಳಿದುಬರುವುದು. ಅವರ ಮಹಾತ್ಮೆಯಲ್ಲಿ ಲೋಕೋಪಕಾರದ ಮಹತ್ತಿದೆ. ಆರ್ತರ ಮೊರೆಗೆ ತಕ್ಷಣ ಓಗೊಡುವ ಶಿರೀಷ ಪುಷ್ಪ ಸದೃಶ ಮೃದುಮನಸ್ಸು ಶ್ರೀಗುರುರಾಜರದು. ರಾಜಾ ರಂತಿದೇವ ಪ್ರಾರ್ಥಿಸಿದಂತೆ "ಭಗವಂತನಿಂದ ಅಷ್ಟೈಶ್ವರ್ಯದಿಂದ ಕೂಡಿದ ಅಥವ ಜನನ ಮರಣರಹಿತವಾದ ಎಂಥ ಶ್ರೇಷ್ಠ ಗತಿಯನ್ನೂ ನಾನು ಇಚ್ಛಿಸುವುದಿಲ್ಲ. ದೇಹಧಾರಿಗಳಾದ ಜನರಿಗೆ ಬರುವ ಕ್ರೂರದುಃಖವನ್ನು ಅವರ ಅಂತಃಕರಣದಲ್ಲಿ ಪ್ರವೇಶಿಸಿ ಅವರು ದುಃಖದಿಂದ ದೂರಾಗುವಂತೆ ನಾನು ಅನುಭವಿಸಬೇಕೆಂದು ಇಚ್ಛಿಸುತ್ತೇನೆ". ಶ್ರೀಗುರುರಾಜರೂ ಆತ್ಮದ ಬಗ್ಗೆ ಬಹಳ ಅನುಕಂಪ ತೋರುತ್ತಾರೆ. ಆದುದರಿಂದಲೇ ಶ್ರೀಜಗನ್ನಾಥದಾಸರು.

"ವೊಂದಿ ಬದುಕಿರೊ ರಾಘವೇಂದ್ರ
ರಾಯರಾ ।
ಕುಂದದೆಮ್ಮನು ಕರುಣದಿಂದ
ಪೊರೆವರಾ ॥
ನಂಬಿ ನುತಿಸುವ ಜನರ ಎಲ್ಲ ಇಷ್ಟವಾ ।
ತುಂಬಿಕೊಡುವನು ಅನ್ಯ ಹಂಬಲೀ
ಯದೆ" ॥

ಎಂದು ಕೊಂಡಾಡಿದ್ದಾರೆ.

ಶ್ರೀಗುರುರಾಜರಿಗೆ ಅವರ ಮಹಾತ್ಮೆ ಹೇಗೆ ಬಂದಿತು ಎಂದರೆ; ಅವರು ಶ್ರೀಮದಾನಂದ ತೀರ್ಥರ ಗ್ರಂಥಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆದಿದ್ದರಿಂದಲೇ ಬಂದಿದೆ. ಏಕೆಂದರೆ 'ಸುಮಧ್ವವಿಜಯ'ಕಾರರು,

"ಗಾಂಗ ಮಂಗಲ ತರಂಗ ಭಂಗದ
ಪ್ರಾಂತನು ಶ್ರೀಹರಿವೇಶ್ಮ ಕೃತ್ಸಮಃ"

ಎಂದಿದ್ದಾರೆ. ಅಂದರೆ ಮಧ್ವರ ಭಾಷ್ಯದ ಒಂದು ಲಿಪಿಯನ್ನು ಬರೆದವರಿಗೆ ಗಂಗೆಯ ತಡಿಯಲ್ಲಿ ಶ್ರೀಹರಿಮಂದಿರವನ್ನು ಕಟ್ಟಿಸಿದಷ್ಟು ಪುಣ್ಯವಂತೆ. ಹೀಗಿರುವಾಗಿ ಇಡಿಯ ಗ್ರಂಥರಾಶಿಯನ್ನು ಬರೆದಿಟ್ಟ ಶ್ರೀಗುರುರಾಜರ ಪುಣ್ಯಸಂಪತ್ತು ಎಷ್ಟಿರಬೇಕು. ಆ ಪುಣ್ಯ ವಿಶೇಷದಿಂದಲೇ ಶ್ರೀರಾಯರಿಗೆ ಮುಕ್ತಿ ಕೊಡುವ ಶಕ್ತಿಯೂ ಉಂಟಾಗಿರುವುದು. ಆದ್ದರಿಂದಲೇ ದಾಸರಾಯರುಗಳು "ರಾಯರ ಪದಯುಗ ತೋಯಜವಿರಲೆಮ ರಾಯನ ಭಯವಿಲ್ಲ ಮನಕೆ"ಎಂದು ಹಾಡಿರುವುದು.

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ತೆಂಗು ತೋಟಗಳ ನಡುವೆ
# ತ್ರಿಕೂಟಾಚಲ

ಸುಮಾರು ಮೂರು ನೂರು ವರ್ಷಗಳ ಕಾಲ ಈಗಿನ ಹಾಸನ ಜಿಲ್ಲೆಯ ಬೇಲೂರು, ಹಳೇಬೀಡುಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಿದ ಹೊಯ್ಸಳಸಾಮ್ರಾಜ್ಯವು ಕಾಲಚಕ್ರದ ತಿರುಗಣೆಯಲ್ಲಿ ಮರೆಯಾಗಿ ಹೋಗಿದ್ದರೂ, ಹೊಯ್ಸಳ ದೊರೆಗಳು, ಅವರ ಮಂತ್ರಿ ಸೇನಾಧಿಪತಿಗಳು ಅವರ ನೆರಳಿನಲ್ಲಿ ಬೆಳೆದ ಸಾಮಂತರುಗಳು ಸಂರಕ್ಷಿಸಿ ಪೋಷಿಸಿ ಬೆಳೆಸಿಕೊಂಡು ಬಂದ ಹೊಯ್ಸಳ ಶಿಲ್ಪಕಲೆಯ ಸ್ಮಾರಕಗಳಾಗಿ ಉಳಿದು ಬಂದಿರುವ "ಶಿಲೆಯಲ್ಲವೀ ಗುಡಿಯು ಕಲೆಯ ಬಲೆಯು" ಎಂದು ಸಾರಿ ಹೇಳುವ ಹತ್ತಾರು ದೇವಾಲಯಗಳು ಹೊಯ್ಸಳ ಸಾಮ್ರಾಜ್ಯದ ನೆನಪನ್ನು ಚಿರಸ್ಥಾಯಿಯಾಗಿ ಉಳಿಸಿವೆ. ಹೊಯ್ಸಳರ ಕಾಲದಲ್ಲಿ ನಿರ್ಮಿತವಾದ ಎಲ್ಲ ದೇವಾಲಯಗಳೂ ಬೇಲೂರು, ಹಳೇಬೀಡುಗಳ ಕಲಾವೈಭವಕ್ಕೆ ಸರಿಸಾಟಿಯಾಗಿ ನಿಲ್ಲಲು ಸಾಧ್ಯವಿಲ್ಲದಿದ್ದರೂ ತಮ್ಮಲ್ಲಿರುವ ಕಲೆಯ ಶಕ್ತಿಯಿಂದ ನೋಡಹೋದವರನ್ನು ಸೆರೆಹಿಡಿಯುತ್ತವೆ.

ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ನುಗ್ಗೀಹಳ್ಳಿಯಲ್ಲಿರುವ ಶ್ರೀ ಲಕ್ಷ್ಮೀನರಸಿಂಹ ದೇವಾಲಯ ಕೂಡ ಹೊಯ್ಸಳರ ಅಪೂರ್ವ ಕೊಡುಗೆಯಾಗಿದ್ದು ಅಂದಿನ ಶಿಲ್ಪಿಗಳ ಕಲಾ ಕುಶಲತೆಗಳ ಕೈ ದೀವಿಗೆಯಾಗಿದೆ. ಚೆನ್ನರಾಯಪಟ್ಟಣದಿಂದ ತಿಪಟೂರಿಗೆ ಹೋಗುವ ರಾಜ್ಯ ಹೆದ್ದಾರಿಯಲ್ಲಿ 18ನೇ ಕಿ. ಮೀ. ನಲ್ಲಿ ನುಗ್ಗೀಹಳ್ಳಿ ಇದೆ. ತಿಪಟೂರಿನಿಂದ 31 ಕಿ.ಮೀ. ದೂರವಾಗುತ್ತದೆ. ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ, ತುಮಕೂರು ಜಿಲ್ಲೆಯ ತಿಪಟೂರು ಕಲ್ಪವೃಕ್ಷವಾದ ತೆಂಗಿಗೆ ಹೆಸರಾದವು. ನುಗ್ಗೀಹಳ್ಳಿಯ ದಾರಿಯುದ್ದಕ್ಕೂ ಚೆನ್ನಾಗಿ ಬೆಳೆದು ಫಲ ಬಿಟ್ಟು ನಿಂತಿರುವ ತೆಂಗು ತಲೆದೂಗಿ ನಮ್ಮನ್ನು ಸ್ವಾಗತಿಸುತ್ತದೆ. ನಾಲಿಗೆಗೆ ರುಚಿಯಾಗಿ ದೇಹಕ್ಕೆ ತಂಪನ್ನು ನೀಡುವ ತೆಂಗಿನಂತೆಯೇ ನುಗ್ಗೀಹಳ್ಳಿಯ ದೇವಾಲಯದ ಕಲೆ ನೋಡುವ ಕಣ್ಣುಗಳನ್ನು ತಣಿಸುತ್ತದೆ.

## ಪ್ರಾಚೀನ ಪಟ್ಟಣ

ಇಂದು ಸಣ್ಣ ಗ್ರಾಮವಾಗಿದ್ದರೂ ನುಗ್ಗೀಹಳ್ಳಿಯು ತುಂಬಾ ಪ್ರಾಚೀನವಾದ ಪಟ್ಟಣವಾಗಿದೆ. ಕ್ರಿ. ಶ. 1233 ರಿಂದ 1254 ರ ಅವಧಿಯಲ್ಲಿ ಹೊಯ್ಸಳ ಸಾಮ್ರಾಜ್ಯದ ದೊರೆಯಾಗಿದ್ದ ಸೋಮೇಶ್ವರನ ಬಳಿ ದಂಡನಾಯಕನಾಗಿದ್ದ ಬೊಮ್ಮಣ್ಣನು ಈ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ "ಸೋಮನಾಥಪುರ" ಎಂದು ಹೆಸರಿಟ್ಟು ದೇವಾಲಯವನ್ನು ಕಟ್ಟಿಸುತ್ತಾನೆ. ಹೊಯ್ಸಳೇಶ್ವರ ವಿಷ್ಣುವರ್ಧನನ ಕಾಲದಲ್ಲಿಯೇ ನುಗ್ಗೀಹಳ್ಳಿಗೆ ಸಮೀಪದಲ್ಲಿ ಒಂದು ಸಣ್ಣ ಗುಡ್ಡದಮೇಲಿರುವ ಜಯಗೊಂಡೇಶ್ವರ ದೇವಾಲಯಕ್ಕೆ ಕ್ರಿ.ಶ. 1121ರಲ್ಲಿ ವಿಷ್ಣುವರ್ಧನ ಪ್ರಭು ದಾನವನ್ನು ನೀಡಿದ ಬಗ್ಗೆ ಅಲ್ಲಿರುವ ಒಂದು ಶಾಸನದಿಂದ ತಿಳಿದು ಬರುತ್ತದೆ. ಇದರಿಂದ ಹೊಯ್ಸಳ ದೊರೆಗಳಿಗೆ, ಅವರ ಊಳಿಗದವರಿಗೆ ನುಗ್ಗೀಹಳ್ಳಿಯ ಪ್ರಶಾಂತ ವಾತಾವರಣದ ಪರಿಸರ ಹೊಸದೇನೂ ಆಗಿರಲಿಲ್ಲವೆಂದು ಕಂಡು ಬರುತ್ತದೆ.

ಶಕವರ್ಷ 1168 (ಕ್ರಿ.ಶ. 1246) ನೆಯ ಪರಾಭವ ಸಂವತ್ಸರದ ಚೈತ್ರ ಶುದ್ಧ ಬುಧವಾರದಂದು ಬೊಮ್ಮಣ್ಣ ದಂಡನಾಯಕನು ತಾನು ಕಟ್ಟಿಸಿದ ತ್ರಿಕೂಟಾಚಲ ದೇವಾಲಯದಲ್ಲಿ ಪ್ರಸನ್ನ ಕೇಶವ ದೇವರು, ನರಸಿಂಹ ದೇವರು, ಗೋಪಾಲದೇವರುಗಳನ್ನು ಸ್ಥಾಪಿಸುತ್ತಾನೆ. ಈ ದೇವಾಲಯಕ್ಕೆ ಹತ್ತಿರದಲ್ಲಿಯೇ ಕಟ್ಟಿಸಿರುವ ಮತ್ತೊಂದು ದೇವಾಲಯದಲ್ಲಿ ಕ್ರಿ.ಶ. 1249ರ ಕೀಲಕ ಸಂವತ್ಸರದ ಫಾಲ್ಗುಣ ಪೌರ್ಣಮಿ ಆದಿವಾರದಂದು ಸದಾಶಿವ ದೇವರನ್ನು ಪ್ರತಿಷ್ಠಾಪನೆ ಮಾಡಿಸಿ ದೇವಾಲಯಗಳಲ್ಲಿ ಪೂಜಾದಿಕಾರ್ಯಗಳು, ಆಹಾರದಾನಾದಿಗಳು ನಡೆಯಲು ಭೂಮಿಯನ್ನು ದತ್ತಿಯಾಗಿ ಬಿಡುತ್ತಾನೆ.

ಬೊಮ್ಮಣ್ಣ ದಂಡನಾಯಕನಂತೆಯೇ ಆತನ ಅಕ್ಕ ಲಖ್ಖುವೆಯಕ್ಕ ಕೂಡ ತನ್ನ ತಮ್ಮ ಕಟ್ಟಿಸಿದ ಅಗ್ರಹಾರದ ದೇವಾಲಯಗಳಿಗೆ ಕ್ರಿ.ಶ. 1253 ರ ಪರೀಧಾವಿ ಸಂವತ್ಸರದಲ್ಲಿ ಸಮಸ್ತ ಪ್ರಶಸ್ತಿ ಸಮೇತವಾಗಿ "ಶ್ರೀ ವಿಜಯ ಸೋಮನಾಥಪುರವಾದ ನುಗ್ಗೀಹಳ್ಳಿಯ ಅಶೇಷ ಮಹಾಜನಂಗಳ ಕೈ" ಯಲ್ಲಿ ದಾನವನ್ನು ಅರ್ಪಿಸುತ್ತಾಳೆ. ಕಮ್ಮಟದ ಬಸವಣ್ಣ ಎಂಬುವವನೂ ಕೂಡ ಅದೇ ವರ್ಷ ತಾನು ಕಟ್ಟಿಸಿದ ಬ್ರಹ್ಮಸಮುದ್ರವಾದ ಹಿರಿಯ ಕೆರೆಯ ಕೆಳಗಿನ ಭೂಮಿಯನ್ನು "ತತ್ಕಾಲೋಚಿತ ಕ್ರಯವಂ ಕೊಟ್ಟು ಕೊಂಡು ಅಗ್ರಹಾರದ ಬ್ರಾಹ್ಮಣರ ಭೋಜನಾದಿಗಳಿಗಾಗಿ" ದತ್ತಿಯಾಗಿ ನೀಡುತ್ತಾನೆ.

ಹಾಸನದ ಬಳಿ ಇರುವ "ಸೀಗೆ" ಊರಿನ ಹನುಮಂತ ದೇವರಿಗೆ ಶ್ರೀಮುಖ ಸಂವತ್ಸರದಲ್ಲಿ (ಕ್ರಿ.ಶ. 1513) ಶ್ರೀಮಾನ್ ಮಹಾ ಮಂಡಲೇಶ್ವರ ನುಗ್ಗೀಹಳ್ಳಿಯ ವಿರುಪಾರಾಜ ಮಹಾ ಅರಸುಗಳ ಕುಮಾರ ಮಲರಾಜರುಗಳು 'ತಮಗೆ ಪುಣ್ಯ ಲಭಿಸಲಿ' ಎಂದು ದಾನ ಮಾಡಿದ್ದಾನೆ. ಕ್ರಿ.ಶ, 1573 ರಲ್ಲಿ ಹಾಸನ ಜಿಲ್ಲೆಯ ಶಾಂತಿಗ್ರಾಮದ ಧರ್ಮೇಶ್ವರ ದೇವಾಲಯಕ್ಕೆ ನವರಂಗದ ಕಲ್ಲು ಬಾಗಿಲನ್ನು ಕಟ್ಟಿಸಿ ನುಗ್ಗೀಹಳ್ಳಿಯ ರಾಯ ಒಡೆಯರು ಕುಮಾರ ಇಂದುಶೇಖರ ರಾಜರುಗಳ ಕುಮಾರ ಜಗದೇಕತ್ಯಾಗಿ, ಭುವನೈಕವೀರ ಬಸವರಾಜಯ್ಯ ದೇವ ಮಹಾ ಅರಸುಗಳ ದೇವಾಲಯದಲ್ಲಿ ಹುಲಿ ಮುಖವನ್ನು ಇಡಿಸುತ್ತಾನೆ. ಕ್ರಿ.ಶ. 1627 ರಲ್ಲಿ ನುಗ್ಗೀಹಳ್ಳಿಯ ಸಿಂಹಾಸನದ ಗುರುದೇವರಿಗೆ ಸಾಲ ನಾಯಕನ ಮಗ ಇಮ್ಮಡಿ ಭೈರಪ್ಪನಾಯಕನು ತನ್ನ ಹೆಸರಿನಲ್ಲಿ "ಭೈರಾಪುರ" ಎಂಬ ಗ್ರಾಮವನ್ನು ಕಟ್ಟಿಸಿ ದತ್ತಿಯಾಗಿ ನೀಡುತ್ತಾನೆ.

ಹೀಗೆ ಹಲವಾರು ಶತಮಾನಗಳ ಕಾಲ ಅನೇಕ ಧರ್ಮಭೀರುಗಳ ಆಡಳಿತದಲ್ಲಿ ಉಳಿದ ನುಗ್ಗೀಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯ ಮೈಸೂರು ಜಿಲ್ಲೆಯ ಸೋಮನಾಥಪುರದ ದೇವಾಲಯಕ್ಕಿಂತಲೂ ಸುಮಾರು ಇಪ್ಪತ್ತು ವರ್ಷಗಳಷ್ಟು ಮುಂಚಿತವಾಗಿಯೇ ನಿರ್ಮಿತವಾಗಿದ್ದು, ವಿಜಯನಗರ ಅರಸರ ಕಾಲದಲ್ಲಿ ಮತ್ತಷ್ಟು, ನಂತರ ಮತ್ತಷ್ಟು ಕಟ್ಟಡಗಳ ಸೇರ್ಪಡೆಯನ್ನು ಹೊಂದಿ ವಿಶಾಲವಾಗಿ ಬೆಳೆದಿದೆ.

ಇತ್ತೀಚಿನ ಕಟ್ಟಡಗಳ ಸೇರ್ಪಡೆಯಿಂದ ಮೂಲ ಹೊಯ್ಸಳ ದೇವಾಲಯದ ಕಲ್ಪನೆಯೇ ದೇವಾಲಯದ ಎದುರು ಬಂದವರಿಗೆ ಆಗುವುದಿಲ್ಲ. ದೇವಾಲಯದ ಸುತ್ತಲೂ ಕಟ್ಟಿರುವ ಕಲ್ಲಿನ ಗೋಡೆಯ ಮಹಾದ್ವಾರವನ್ನು ಹೊಕ್ಕು ವಿಶಾಲವಾದ ವಿಜಯನಗರ ಕಾಲದ ಹಜಾರವನ್ನು ದಾಟಿ ಹೊರಾಂಗಣದತ್ತ ಹೋದರೆ ಮೂಲ ಹೊಯ್ಸಳ ದೇವಾಲಯದ ರೂಪು ಗೋಚರವಾಗುತ್ತದೆ. ಸುಮಾರು ನಾಲ್ಕು ಅಡಿ ಎತ್ತರದ ಜಗಲಿಯ ಮೇಲೆ ದೇವಾಲಯವನ್ನು ನಿರ್ಮಿಸಲಾಗಿದೆ. ದೇವಾಲಯದ ಹೊರ ಗೋಡೆಗಳಲ್ಲಿ ಅಂದವಾದ ವಿಗ್ರಹಗಳನ್ನು, ಪಶುಪಕ್ಷಿಗಳನ್ನೂ ಕೆತ್ತಿ ಸುಂದರವಾಗಿ ಮಾಡಿದ್ದಾರೆ. ನಾಲ್ಕನೆಯ ಚಿತ್ರಪಟ್ಟಿಕೆಯಲ್ಲಿ ಉತ್ತರದ ಗರ್ಭಗುಡಿಯಿಂದ ಶ್ರೀ

ಕೃಷ್ಣನ ಕತೆಯನ್ನು ಬಿಡಿಸಲಾಗಿದೆ. ಯಶೋದೆಗೆ ಶ್ರೀಕೃಷ್ಣ ಬಾಯಿ ತೆರೆದು ವಿಶ್ವರೂಪವನ್ನು ತೋರಿಸುವುದು, ತೊಟ್ಟಿಲಿನಲ್ಲಿ ಕೃಷ್ಣ, ಗೋಪಿಕೆಯರು ಕೃಷನನ್ನು ದಂಡಿಸುತ್ತಿರುವುದು, ಕೃಷ್ಣನು ಕಾಳಿಂಗ ಸರ್ಪವನ್ನು ಕೊಲ್ಲುತ್ತಿರುವುದು, ಗೋಪಿಕೆಯರ ನಡುವೆ ಕೃಷ್ಣ, ರಾಕ್ಷಸನನ್ನು ಕೃಷ್ಣ ಕೊಲ್ಲುತ್ತಿರುವುದು, ಕೃಷ್ಣನು ಆನೆಯನ್ನು ಸಂಹರಿಸುತ್ತಿರುವುದು ಇವೇ ಮೊದಲಾದ ಭಾಗವತ ಕತೆಯ ಕೆತ್ತನೆಯನ್ನು ಮಾಡಲಾಗಿದೆ. ಇದರ ಮೇಲಿನ ಎರಡು ಪಟ್ಟಿಗಳಲ್ಲಿ ಮಕರಗಳ ಸಾಲು, ಅದರ ಮೇಲೆ ಹಂಸಗಳ ಸಾಲನ್ನು ಕೆತ್ತಲಾಗಿದೆ.

ಅವರೆ ನಾರಾಯಣ ಅಥವಾ ಪರವಾಸುದೇವನ ವಿಗ್ರಹವನ್ನು ಹಾವಿನ ಸುಪ್ಪತ್ತಿಗೆಯ ಮೇಲೆ ಕುಳಿತಂತೆ ಕೆತ್ತಿದ್ದು, ಏಳು ಹೆಡೆಯ ಸರ್ಪ ತಲೆಯ ಮೇಲಿದೆ. ಮುಖ ಮುದ್ದಾಗಿದ್ದು ಮಗುವಿನ ಕಳೆಯಿದೆ. ಕೆಳಗಡೆ ಬೈಚೋಜ ಮಾಡಿದನೆಂದು ಹೇಳುವ ಶಿಲಾಶಾಸನ ಕೊರೆಯಲಾಗಿದೆ. ಕಲ್ಪವೃಕ್ಷ, ಮೋಹಿನಿ, ನಗ್ನಮೋಹಿನಿ, ರತಿ ಮನ್ಮಥ, ಯೋಗನರಸಿಂಹ, ತ್ರಿವಿಕ್ರಮ, ವಾಮನ ಬಲಿ, ಭೈರವ, ಗೋವರ್ಧನಧಾರಿ, ಉಗ್ರನರಸಿಂಹ, ವೇಣುಗೋಪಾಲ, ಸೂರ್ಯದೇವ, ಸರಸ್ವತಿ, ಲಕ್ಷ್ಮಿ, ವಾಸುದೇವ, ಮಹಿಷಾಸುರ ಮರ್ದಿನಿ, ಅರ್ಜುನ ಮತ್ಸ್ಯಯಂತ್ರವನ್ನು ತೈಲ ಪಾತ್ರೆಯಲ್ಲಿ ನೋಡಿಕೊಂಡು ಭೇದಿಸುತ್ತಿರುವುದು, ಹೂಮಾಲೆಯನ್ನು ಹಿಡಿದು ನಿಂತಿರುವ ದ್ರೌಪದಿ, ರಾಮ, ಲಕ್ಷ್ಮಣ, ಹನುಮಂತ–ಹೀಗೆ ಸುಮಾರು ಐವತ್ತಕ್ಕಿಂತಲೂ ಹೆಚ್ಚಿನ ಸುಂದರವಾದ ವಿಗ್ರಹಗಳಿವೆ. ಈ ವಿಗ್ರಹಗಳ ಮೇಲೆ ಮೇಲ್ಛಾವಣಿಯ ಬೋದಿಗೆಗಳು ಅಲಂಕೃತವಾಗಿ ಕೆತ್ತಲ್ಪಟ್ಟಿವೆ.

ತ್ರಿಕೂಟಾಚಲ ಎಂಬ ಹೆಸರೇ ಸೂಚಿಸುವಂತೆ ದೇವಾಲಯದಲ್ಲಿ ಮೂರು ಗರ್ಭಗುಡಿಗಳಿವೆ. ಮೂಲ ಗರ್ಭಗುಡಿ ಎಂದರೆ ಒಳಗೆ ನಾವು ಕಾಲಿಟ್ಟಾಗ ಎದುರಾಗುವ ಗರ್ಭಗುಡಿ. ಇಲ್ಲಿ ಗರುಡ ಪೀಠದ ಮೇಲೆ ನಾಲ್ಕೂವರೆ ಅಡಿ ಎತ್ತರದ ಕೇಶವಮೂರ್ತಿ ವಿಗ್ರಹವಿದೆ, ಗರ್ಭಗುಡಿಗೆ ಸುಕನಾಸಿ ಇದ್ದು ಸುಕನಾಸಿ ದ್ವಾರದ ಮೇಲೆ ಲಕ್ಷ್ಮಿಯ ವಿಗ್ರಹವಿದೆ. ದಕ್ಷಿಣ ದಿಕ್ಕಿನಲ್ಲಿರುವ ಗರ್ಭಗುಡಿಯಲ್ಲಿ ಕೊಳಲನ್ನು ಊದುತ್ತಿರುವ ವೇಣುಗೋಪಾಲನ ವಿಗ್ರಹವಿದೆ. ಉತ್ತರ ದಿಕ್ಕಿನಲ್ಲಿರುವ ಗರ್ಭಗುಡಿಯಲ್ಲಿ ಗರುಡ ಪೀಠದ ಮೇಲೆ ಕುಳಿತಿರುವ ಲಕ್ಷ್ಮೀನರಸಿಂಹನ ವಿಗ್ರಹವಿದೆ.

ನವರಂಗದಲ್ಲಿ ಕೆತ್ತನೆ ಮಾಡಿದ ನಾಲ್ಕು ಕಂಬಗಳಿವೆ. ಮೇಲುಗಡೆ ಸುಮಾರು ಎರಡು ಅಡಿ ಆಳದ ಸುಂದರವಾಗಿ ಕೆತ್ತನೆ ಮಾಡಿದ ಭುವನೇಶ್ವರಿಗಳಿವೆ. ನವರಂಗದ ಗೋಡೆಯ ಬಳಿ ಬಲಬದಿಯಲ್ಲಿ ಗಣೇಶನ ವಿಗ್ರಹವೂ ಇದೆ. ಎಡ ಬದಿಯಲ್ಲಿ ಮಹಿಷ ಮರ್ದಿನಿಯ ವಿಗ್ರಹವೂ ಇದೆ. ಎಡ ಬದಿಯಲ್ಲಿ ಮಹಿಷ ಮರ್ದಿನಿಯ ಈ ವಿಗ್ರಹದಲ್ಲಿ ಪ್ರತಿಯೊಂದು ಅಂಶವನ್ನೂ ಸೂಕ್ಷ್ಮವಾಗಿ ಬಿಡಿಸಿರುವುದನ್ನು ಕಾಣಬಹುದು. ಎಮ್ಮೆಯ ಕಾಲಿನ ಗೊರಸು, ದೇವಿಯ ಬೆರಳಿನ ಉಗುರುಗಳು, ಬಿಲ್ಲಿನ ದಾರದ ಸೂಕ್ಷ್ಮ ಬೇರ್ಪಡೆ ಎಲ್ಲವೂ ಅಂದವಾಗಿ ಕೆತ್ತಲ್ಪಟ್ಟಿವೆ.

ದೇವಾಲಯದ ಮುಖ ಮಂಟಪ ಹೊಯ್ಸಳರ ಕಾಲದ್ದು. ಪಾತಾಳಂಕಣ, ಹಜಾರ, ದೇವಾಲಯದ ಹೊರಗಿನ ನವರಂಗಗಳು ನಂತರ ವಿಜಯನಗರದ ಅರಸರ ಕಾಲದಲ್ಲಿ ಕಟ್ಟಲ್ಪಟ್ಟವಾಗಿವೆ. ನಮ್ಮ ನಾಡಿನ ಅನೇಕ ಗುಡಿ, ಗೋಪುರಗಳಂತೆಯೇ ಸಮಾಜದ ರಕ್ಷಣೆಯಿಂದ ದೂರವಾಗಿ ಶಿಥಿಲವಾಗಿ, ನಂತರ ಕೆಲವಾರು ಸಾರಿ ಜೀರ್ಣೋದ್ಧಾರವನ್ನು ಕಂಡಂತೆ ನುಗ್ಗೀಹಳ್ಳಿಯ ಈ ದೇವಾಲಯವೂ ಕಂಡಿದೆ. ಕ್ರಿ.ಶ. 1432 ರಲ್ಲಿ ನುಗ್ಗೀಹಳ್ಳಿಯನ್ನು ಅಮೆರೆಯ ನಾಯಕ ಕಟ್ಟಿಗೆಯ ಗುಂಡಪ್ಪ ನಾಯಕರು ಆಳುತ್ತಿರುವಾಗ ಚಿಕ್ಕ ಭೀಮಣ್ಣ ಮತ್ತು ನುಗ್ಗೀಹಳ್ಳಿಯ ಮಹಾ ಜನಗಳು ಇಲ್ಲಿಯ ಇನ್ನೊಂದು ದೇವಾಲಯದ ಸದಾಶಿವ ದೇವರದೇವಾಲಯವನ್ನು ಸಂಪ್ರೋಕ್ಷಣೆ ಮಾಡಿಸುತ್ತಾರೆ. ಕ್ರಿ.ಶ. 1714 ರಲ್ಲಿ ವಿಜಯ ನಾಮ ಸಂವತ್ಸರದಲ್ಲಿ ವೆಂಕಣ್ಣ ಎಂಬಾತ ತನ್ನ ತಂದೆ, ತಾಯಿಗಳಿಗೆ ಶಿವಸಾನ್ನಿಧ್ಯ ದೊರೆಯಲಿ ಎಂದು ಅನೇಕ ಕಡೆ ಶಿಥಿಲವಾಗಿದ್ದ ಸೋಮೇಶ್ವರ ಸ್ವಾಮಿಯವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ಬಗ್ಗೆ ಶಾಸನ ದೊರೆಯುತ್ತದೆ.

ನುಗ್ಗೀಹಳ್ಳಿಯನ್ನು ಅರಸುತ್ತ ಹೋಗುವ ಕಲಾಪ್ರೇಮಿಗೆ ಸುತ್ತಲಿನ ನಿಸರ್ಗವೂ ಮೋಸ ಮಾಡುವುದಿಲ್ಲ. ದೇವಾಲಯದಲ್ಲಿನ ಅಪೂರ್ವವಾದ ಶಿಲ್ಪಕಲಾ ಸಂಪತ್ತೂ ಮನ ತಣಿಸದೆ ಇರುವುದಿಲ್ಲ.

**ಪ್ರಿಯದರ್ಶಿನಿ**

'ಕನ್ನಡಪ್ರಭ' ಆಧಾರದಿಂದ

*

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | | | |
|---|---|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಯಿಂದ | 5–30 | ವರೆಗೆ |
| ಸಹಸ್ರನಾಮಾರ್ಚನೆ | ,, | 5–30 ಗಂಟೆಯಿಂದ | 6–00 | ವರೆಗೆ |
| ಮೊದಲನೆಯ ಗಂಟೆ | ,, | 6–00 ಗಂಟೆಯಿಂದ | 6–30 | ವರೆಗೆ |
| ಸರ್ವದರ್ಶನ | ,, | 6–30 ಗಂಟೆಯಿಂದ | ಮಧ್ಯಾಹ್ನ 1–00 | ವರೆಗೆ |
| ಎರಡನೇ ಗಂಟೆ | ಮಧ್ಯಾಹ್ನ | 1–00 ಗಂಟೆಯಿಂದ | 1–30 | ವರೆಗೆ |
| ಸರ್ವದರ್ಶನ | ,, | 1–30 ರಿಂದ | ರಾತ್ರಿ 7–30 | ವರೆಗೆ |
| ರಾತ್ರಿ ಗಂಟೆ | ರಾತ್ರಿ | 7–00 ರಿಂದ | ರಾತ್ರಿ 8–45 | ವರೆಗೆ |
| ಏಕಾಂತಸೇವೆ, ತೀರ್ವಾನ | ರಾತ್ರಿ | 8–45 ರಿಂದ | ರಾತ್ರಿ 9–00 | ವರೆಗೆ |

ಗಮನಿಕೆ:– ಶುಕ್ರವಾರಗಳಲ್ಲಿ ಮೇಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಉಂಟು.

ಸಹಸ್ರನಾಮಾರ್ಚನೆಯ ಟಿಕೆಟ್ ಬೆಲೆ 6–50 ರೂ. ಒಂದು ಟಿಕೆಟ್ಟಿಗೆ ನಾಲ್ವರು ಅನುಮತಿಸಲ್ಪಡುತ್ತಾರೆ.

ಸರ್ವದರ್ಶನದ ಸಮಯದಲ್ಲಿ 1–50 ರೂ. ಟಿಕೆಟ್ಟಿನಿಂದ ಭಕ್ತರು ಅಷ್ಟೋತ್ತರ ಅರ್ಚನೆ ನಡೆಸಿಕೊಳ್ಳಬಹುದು.

**ಪೇಷ್ಕಾರ್.**

# ವ್ಯಾಸರಾಜರು

15 ನೇ ಶತಮಾನದ ಉತ್ತರಾರ್ಧ ಹಾಗೂ 16 ನೇ ಶತಮಾನದ ಪೂರ್ವಾರ್ಧದಲ್ಲಿ ಕರ್ನಾಟಕದ ಮುಖ್ಯಕೇಂದ್ರ ವಿಜಯನಗರ ಅತ್ಯಂತ ಉಚ್ಛ್ರಾಯ ಸ್ಥಿತಿಗೆ ಬಂದು ದೇಶವಿದೇಶಗಳಲ್ಲಿ ಪ್ರಸಿದ್ಧವಾದುದು ಐತಿಹಾಸಿಕ ದೃಷ್ಟಿಯಿಂದ ಉಲ್ಲೇಖನೀಯ ಅಂಶವಾದಂತೆ, ದ್ವೈತ ಸಿದ್ಧಾಂತದ ಪ್ರಸಾರದ ದೃಷ್ಟಿಯಿಂದಲೂ ಈ ಸಂದರ್ಭ ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದ ಸಂಗತಿಯಾಗಿದೆ. ಶ್ರೀ ವ್ಯಾಸರಾಜರು, ಶ್ರೀ ವಾದಿರಾಜರು, ಪುರಂದರದಾಸರು, ಕನಕದಾಸರು ಮುಂತಾದ ಮಹಾನುಭಾವರು ಈ ಸಂದರ್ಭದಲ್ಲಿ ಹುಟ್ಟಿ, ದಾಸಕೂಟ–ವ್ಯಾಸಕೂಟಗಳ ಸೃಷ್ಟಿ, ಘೋಷಣೆ, ಮೊದಲಬಾರಿಗೆ ಕನ್ನಡದಲ್ಲಿ ದ್ವೈತ ಸಿದ್ಧಾಂತ ಪ್ರಸಾರದ ಕ್ರಾಂತಿ ಮುಂತಾದ ಮಹತ್ಕಾರ್ಯಗಳಿಗೆ ಕಾರಣಕರ್ತರಾಗಿದ್ದಾರೆ.

ಗುರುಸಾರ್ವಭೌಮ ಶ್ರೀ ವ್ಯಾಸರಾಜರ ಬಗ್ಗೆ ತಿಳಿಯಲು ಸೋಮನಾಥಕವಿಯ 'ವ್ಯಾಸಯೋಗಿಚರಿತಂ' ಎಂಬ ಸಂಸ್ಕೃತ ಗ್ರಂಥವನ್ನು ನೋಡಬಹುದು. ದ್ವೈತಸಿದ್ಧಾಂತಾಚಾರ್ಯರಾದ ಶ್ರೀ ವ್ಯಾಸರಾಜರನ್ನು ಮಾಧ್ವರು ಹೊಗಳುವುದರಲ್ಲಿ ಆಶ್ಚರ್ಯವಿಲ್ಲದಿದ್ದರೂ, ಸೋಮನಾಥಕವಿ ವ್ಯಾಸರಾಯರ ಸಮಕಾಲೀನನೆಂಬ ವಿಚಾರ ಮತ್ತು ಅವನು ಸ್ಮಾರ್ತನಾಗಿದ್ದನೆಂಬ ಅಂಶದ ಹಿನ್ನೆಲೆ, ಈ ಚರಿತ್ರೆಯ ಮಹತ್ವ, ನಿಜವಾಗಿಯೂ ಕವಿಯ ಮೇಲೆ ಆದ ವ್ಯಾಸರಾಜರ ಪ್ರಭಾವ ಇವೆಲ್ಲವುಗಳನ್ನು ಸ್ಪಷ್ಟಪಡಿಸುತ್ತವೆ.

ಮೈಸೂರು ಜಿಲ್ಲೆಯ ಬನ್ನೂರು ಗ್ರಾಮದ ರಾಮಾಚಾರ್ಯ – ಲಕ್ಷ್ಮೀದೇವಿ ಎಂಬ ದಂಪತಿಗಳಲ್ಲಿ ಬ್ರಹ್ಮಣ್ಯತೀರ್ಥರ ಅನುಗ್ರಹದಿಂದ ( ಸು. ದಿನಾಂಕ 22–4–1447 ರಂದು ) ಜನ್ಮತಾಳಿ ಯತಿರಾಜನೆಂಬ ನಾಮಾಂಕಿತರಾದರು. ಬ್ರಹ್ಮಣ್ಯತೀರ್ಥರಿಂದ ಸನ್ಯಾಸಾಶ್ರಮವನ್ನು ಪಡೆದ ಮೇಲೆ ಯತಿರಾಜ 'ವ್ಯಾಸತೀರ್ಥ'ರಾದರು. ವ್ಯಾಸರಾಜರೇ ತಮ್ಮ 'ನ್ಯಾಯಾಮೃತ' ಗ್ರಂಥದಲ್ಲಿ ತಿಳಿಸಿದಂತೆ ಇವರ ವಿದ್ಯಾಗುರುಗಳು ಲಕ್ಷ್ಮೀನಾರಾಯಣ ಮುನಿಗಳು ( ಮುಳಬಾಗಿಲಿನ ಶ್ರೀಪಾದರಾಜರು.) ವ್ಯಾಸರಾಜರು ಶ್ರೀಪಾದರಾಜರ ಹತ್ತಿರ ಹನ್ನೆರಡು ವರುಷಗಳವರೆಗೆ ವೇದ–ಶಾಸ್ತ್ರಾಭ್ಯಾಸ ಮಾಡಿದರು. ಈ ಅವಧಿಯಲ್ಲಿಯೇ ಯಾತ್ರೆಗಾಗಿ ಬಂದಿದ್ದ ಉತ್ತರದೇಶದ ನ್ಯಾಯಶಾಸ್ತ್ರಪಂಡಿತ ಪಕ್ಷಧರ ಮಿಶ್ರ ಮುಳಬಾಗಿಲು ವಿದ್ಯಾಲಯವನ್ನು ಸಂದರ್ಶಿಸಿದನು. ಪಾಠ ಹೇಳುತ್ತಿರುವ ಶ್ರೀಪಾದರಾಜರ ಎದುರಿನಲ್ಲಿಯೇ ವ್ಯಾಸರಾಜರ ನಿರೂಪಣಾ ವೈಖರಿಯನ್ನು ಕಂಡು ಬೆಕ್ಕಸಬೆರಗಾಗಿ ಪಕ್ಷಧರ ಮಿಶ್ರ "ಯದಧೀತಂ ತದಧೀತಂ ಯದನಧೀತಂ ತದಪ್ಯಧೀತಂ । ಪಕ್ಷಧರಮಿಶ್ರೋ ನಾಪೇಕ್ಷಿ ವಿನಾ ನವೀನವ್ಯಾಸೇನ ॥" ಎಂದು ಉದ್ಗಾರ ತೆಗೆದನು- ಈ ಮಾತಿದ ಅರ್ಥ ಹೀಗಿದೆ. 'ನಾನು ಯಾವ ಯಾವ ಶಾಸ್ತ್ರಗಳನ್ನು ಓದಿರುವೆನೋ ಅವೆಲ್ಲವನ್ನೂ ವ್ಯಾಸರಾಜರು ಓದಿದ್ದಾರೆ. ನಾನು ಅಭ್ಯಾಸ ಮಾಡದಿರುವ ಎಲ್ಲ ವಿದ್ಯೆಗಳನ್ನೂ ಸಹ ಇವರು ಓದಿದ್ದಾರೆ. ಸಕಲ ವಿದ್ಯೆಗಳಲ್ಲಿ ಪರಿಪೂರ್ಣ ಪಾಂಡಿತ್ಯ–ಪ್ರತಿಭೆಗಳಿಂದ ಶ್ರೀ ವೇದವ್ಯಾಸರಂತೆ ಕಂಗೊಳಿಸುವ ಈ ನವೀನವ್ಯಾಸರನ್ನು ( ವ್ಯಾಸರಾಜರನ್ನು ) ಬಿಟ್ಟು ಬೇರೊಬ್ಬ ಪಂಡಿತನನ್ನು ಪಕ್ಷಧರಮಿಶ್ರನು

ಶ್ರೀ ಆರ್. ಗುರುರಾಜ ಗುಡಿ

(ನಾನು) ನೋಡಲಿಲ್ಲ ! ವಾದವಿದ್ಯಾವಿಶಾರದನಾದ ಪ್ರಕಾಂಡಪಂಡಿತನಾದ ಪಕ್ಷಧರಮಿಶ್ರನಂಥ ಪರಮತೀಯ ಪಂಡಿತನೊಬ್ಬನು ಶ್ರೀ ಚಂದ್ರಿಕಾಚಾರ್ಯರನ್ನು ಪ್ರಶಂಸಿಸಿದ್ದನ್ನು ಕೇಳಿದಾಗ ಅದಾವ ಸಜ್ಜನನ ಹೃದಯ ತುಂಬಿ ಬರಲಿಕ್ಕಿಲ್ಲ ? ಅದಾವ ದ್ವೈತಿಯ ಹೃದಯ ಹೆಮ್ಮೆ, ಆದರಾಭಿಮಾನಗಳನ್ನು ವ್ಯಕ್ತಪಡಿಸಲಿಕ್ಕಿಲ್ಲ ?

ವ್ಯಾಸರಾಜರು ರಾಜೇಂದ್ರತೀರ್ಥರ ಪೀಳಿಗೆಯಲ್ಲಿ ಬಂದವರಾದರೂ, ಇವರ ಪ್ರಭಾವದಿಂದಾಗಿ ಆ ಮಠವು (ಸೋಸಲೆ) ವ್ಯಾಸರಾಜ ಮಠವೆಂದೇ ಪ್ರಸಿದ್ಧವಾಯಿತು. ವೇದಾಂತ ಸಾಮ್ರಾಜ್ಯಾಭಿಷಕ್ತರಾದ ವ್ಯಾಸರಾಜರು, ಗುರುಗಳಾದ ಬ್ರಹ್ಮಣ್ಯತೀರ್ಥರು ವೃಂದಾವನಸ್ಥರಾದಮೇಲೆ ದೇಶಾದ್ಯಂತ ದಿಗ್ವಿಜಯಕ್ಕಾಗಿ ಹೊರಟರು. ಮೊದಲು ಉತ್ತರಭಾರತ ಸಂಚಾರ ಮಾಡಿ ಅನಂತರ ಪಶ್ಚಿಮ ಬಂಗಾಳಕ್ಕೆ ಬಂದು ನಂತರ ದಕ್ಷಿಣದೇಶಕ್ಕೆ ಹಿಂತಿರುಗಿದರು. ಆಗ ವಿಜಯನಗರವನ್ನು ಆಳುತ್ತಿದ್ದ ಸಾಳುವ ನರಸಿಂಹರಾಯನ ಪ್ರಾರ್ಥನೆಯಂತೆ ಶ್ರೀಪಾದರಾಜರು, ರಾಜಗುರುಗಳಾಗಿ ಮಾರ್ಗದರ್ಶನ ನೀಡಲು ವ್ಯಾಸರಾಜರನ್ನು ಕಳಿಸಿಕೊಡುವರು. ವ್ಯಾಸರಾಜರು ಚಂದ್ರಗಿರಿಗೆ ಬಂದು ನೆಲೆಸಿದರು. ಸಮೀಪದಲ್ಲಿಯೇ ತಿರುಪತಿ ವೆಂಕಟೇಶನ ಸನ್ನಿಧಾನ. ಹತರಾದ ಪೂಜಾರಿಯ ಸಂತತಿಯ ಹುಡುಗ ದೊಡ್ಡವನಾಗುವವರೆಗೆ ತಿರುಪತಿ ವೆಂಕಟೇಶನ ಪೂಜಾವ್ಯವಸ್ಥೆ ನಡೆಯಬೇಕಾಗಿತ್ತು. ಭಕ್ತ ಸಾಳುವ ನರಸಿಂಹರಾಯನ ಪ್ರಾರ್ಥನೆಯಂತೆ ವ್ಯಾಸರಾಜರು ಆ ಜವಾಬ್ದಾರಿಯನ್ನು ಕೈಗೆತ್ತಿಕೊಂಡು 12 ವರ್ಷಗಳ ಕಾಲ ಶ್ರೀ ಶ್ರೀನಿವಾಸನ ಪೂಜೆ ಮಾಡಿ ಪೂಜಾವ್ಯವಸ್ಥೆ ಸರಿಯಾದ ಮೇಲೆ ಆ ದೇವಸ್ಥಾನವನ್ನು ಪುನಃ ಸಾಳುವ ನರಸಿಂಹರಾಯನ ಕೈಗೇನೇ ಒಪ್ಪಿಸಿದರು. ಇವರು 12 ವರ್ಷ ವೆಂಕಟೇಶನ ಪೂಜೆ ಮಾಡಿದ ಕುರುಹಾಗಿ ಇಂದಿಗೂ ಕೂಡ ತಿರುಮಲೆಯಲ್ಲಿ ಸ್ವಾಮಿಪುಷ್ಕರಣಿ ದಡದಲ್ಲಿ ಉಳಿದೆಲ್ಲವುಗಳೂ ಹೋದರೂ 'ವ್ಯಾಸರಾಜ ಆಹ್ನಿಕ ಮಂಟಪ'ವೊಂದು ಮಾತ್ರ ಉಳಿದಿರುವುದನ್ನು ಕಾಣಬಹುದು.

ವ್ಯಾಸರಾಜರನ್ನು ವಾದದಲ್ಲಿ ಗೆಲ್ಲಬೇಕೆಂದು ಬಂದವರೆಲ್ಲರೂ ಅವರ ಪ್ರತಿಭೆಗೆ ತಲೆದೂಗಿ ವ್ಯಾಸರಾಜರನ್ನು ಮುಕ್ತಕಂಠದಿಂದ ಪ್ರಶಂಸಿಸಿದವರೇ ಆಗಿದ್ದಾರೆ. ಅವರಲ್ಲಿ ಕಳಿಂಗ ದೇಶದ ಬಸವಭಟ್ಟನೆಂಬ ಪಂಡಿತನು ವ್ಯಾಸರಾಜರ ಜೊತೆಗೆ ಬಹಳದಿನ ನಡೆದ ವಾದದಲ್ಲಿ ಸೋತು, ಸಕಲ ರಾಜಸಭೆಯ ಸಮ್ಮುಖದಲ್ಲಿ ತನ್ನ ಸರ್ವಸ್ವವಾಗಿದ್ದ ಪಚ್ಚೆಲಿಂಗವನ್ನು ವ್ಯಾಸರಾಯರಿಗೆ ಕಾಣಿಕೆಯಾಗಿ ಅರ್ಪಿಸಿದನು. ಈ ಲಿಂಗವು ಈಗಲೂ ವ್ಯಾಸರಾಜ ಮಠದಲ್ಲಿದ್ದು, ಶಿವರಾತ್ರಿಯಂದು ವಿಶೇಷ ಪೂಜೆಯೂ ಸಹ ಅದಕ್ಕೆ ಸಲ್ಲುತ್ತಲಿದೆ. ವ್ಯಾಸರಾಜರು ವಿಜಯನಗರ ಸಾಮ್ರಾಜ್ಯದ ರಾಜಗುರುಗಳಾಗಿ ಮಾರ್ಗದರ್ಶನ ನೀಡುತ್ತಿದ್ದುದರಿಂದ ದೇಶ–ವಿದೇಶಗಳಲ್ಲಿಯೂ ವಿಜಯನಗರದ ಕೀರ್ತಿಪತಾಕೆಯು ಹಾರಾಡಿತು. ಮುಂದೆ ಕೃಷ್ಣದೇವರಾಯನೂ ಸಹ ವ್ಯಾಸರಾಜರ ಆಜ್ಞೆಯನ್ನು ಚಾಚೂ ತಪ್ಪುತ್ತಿರಲಿಲ್ಲ. ಒಮ್ಮೆ ಕೃಷ್ಣದೇವರಾಯನಿಗೆ ಪ್ರಾಣಾಂತಿಕವಾದ ಗ್ರಹಪೀಡೆಯಾದ 'ಕುಹುಯೋಗ'ವು ಬಂದೊದಗಿತು. ಅದನ್ನೂ ಸಹ ವ್ಯಾಸರಾಜರು ತಮ್ಮ ತಪೋಬಲದಿಂದ ದೂರ ಮಾಡಿದರು.

ವ್ಯಾಸರಾಜರು ವಿಜಯನಗರದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯವೊಂದನ್ನು ಸ್ಥಾಪಿಸಿ ಅದರ ಕುಲಪತಿಗಳಾಗಿದ್ದರು. ವಿದ್ಯಾರ್ಜನೆಗಾಗಿ ದೇಶ–ವಿದೇಶಗಳಿಂದ ಜನರು ಇಲ್ಲಿಗೆ ಬಂದು ವಿವಿಧ ಶಾಸ್ತ್ರ–ಕಲೆಗಳಲ್ಲಿ ಪಾರಂಗತರಾಗುತ್ತಿದ್ದರು. ಭಾರತದ ಪ್ರಾಚೀನ ಸಂಸ್ಕೃತ ವಿಶ್ವವಿದ್ಯಾನಿಲಯಗಳಾದ ನಲಂದ, ತಕ್ಷಶಿಲೆಗಳಂತೆ ವಿಜಯನಗರ ಸಂಸ್ಕೃತ ವಿಶ್ವವಿದ್ಯಾನಿಲಯವು ಪರದೇಶಗಳಲ್ಲಿಯೂ ಪ್ರಖ್ಯಾತಿ ಪಡೆಯಿತು. ವ್ಯಾಸರಾಜರು ಉತ್ತರ ಭಾರತದಲ್ಲಿ ಹರಿದ್ವಾರ, ಕಾಶಿ, ಗಯಾ, ಬಂಗಾಳಗಳಲ್ಲಿ ತಲಾ ಒಂದೊಂದು ವಿದ್ಯಾಪೀಠ, ದಕ್ಷಿಣಭಾರತದಲ್ಲಿ ಕುಂಭಕೋಣ, ಉಡುಪಿ, ಮುಳಬಾಗಿಲು, ಕಂಚಿಗಳಲ್ಲಿ ಒಂದೊಂದರಂತೆ ಒಟ್ಟು ಎಂಟು ವಿದ್ಯಾಪೀಠಗಳನ್ನು ಸ್ಥಾಪಿಸಿ, ಶ್ರೇಷ್ಠ ವಿದ್ವಾಂಸರಾದ ತಮ್ಮ ಶಿಷ್ಯರನ್ನು ಅದರ ಕುಲಪತಿಗಳನ್ನಾಗಿ ಮಾಡಿ ಭಾರತದಾದ್ಯಂತ ವಿದ್ಯಾಪ್ರಸಾರ ಮಾಡಿ ಮಹೋಪಕಾರ ಮಾಡಿದರು.

ವ್ಯಾಸರಾಜರ ಮತ್ತೊಂದು ಮಹೋನ್ನತ ಕಾರ್ಯ ದಾಸಕೂಟ ನಿರ್ಮಾಣ. ಶ್ರೀಸಾಮಾನರಿಗೆ ಕಬ್ಬಿಣ ಕಡಲೆಯಂತಿದ್ದ ಬ್ರಹ್ಮಸೂತ್ರ, ಪುರಾಣ, ಭಾರತ ಮುಂತಾದ ವ್ಯಾಸಸಾಹಿತ್ಯ, ಸುಲಿದ ಬಾಳೆಹಣ್ಣಿನಂತೆ ಮಹಿಳೆಯರೂ ಸೇರಿದಂತೆ ಶ್ರೀ ಸಾಮಾನ್ಯನಿಗೂ ತಲುಪಲು ವ್ಯಾಸರಾಜರು ದಾಸಕೂಟವನ್ನು ನಿರ್ಮಿಸಿದರು. ಆಗಿನ ಕೆಲವು ಸಂಪ್ರದಾಯಸ್ಥರು ಭಾವಿಸಿದ್ದಂತೆ 'ಕನ್ನಡ ನುಡಿ ಮಡಿಗೆ ಅಡೆ ತಡೆ' ಯಾಗಿದ್ದುದನ್ನು ಅಲ್ಲಗಳೆದು ವ್ಯಾಸರಾಜರು ಸ್ವತಃ ತಾವೇ ಕನ್ನಡದಲ್ಲಿ ಪದ್ಯಗಳನ್ನು ರಚಿಸಿ, ಪುರಂದರದಾಸರು, ಕನಕದಾಸರು ಮೊದಲಾದವರಿಗೆ ಉಪದೇಶ ಮಾಡಿ ವೇದರಹಸ್ಯ ಉಪದೇಶಗಳು ಜನರಿಗೆ ತಿಳಿಯುವಂತೆ ಕನ್ನಡದಲ್ಲಿ ಪದ್ಯರಚನೆ ಮಾಡುವಂತೆ ಹೇಳಿದರು. ವ್ಯಾಸಕೂಟದಿಂದ ವಿದ್ವಾಂಸವರ್ಗವನ್ನು ಬೆಳೆಸಿದಂತೆ ದಾಸಕೂಟದಿಂದ ದಾಸರ ಗುಂಪನ್ನು ಕಟ್ಟಿ ಕನ್ನಡ ಸಾಹಿತ್ಯಕ್ಕೆ, ಕರ್ನಾಟಕ ಸಂಗೀತಕ್ಕೆ ಒಂದು ಹೊಸ ತಿರುವು ಕೊಟ್ಟಿದಲ್ಲದೇ, ಹರಿಭಕ್ತಿ, ಲೋಕನೀತಿ ಮನೆಮನೆಗೆ ಮುಟ್ಟುವಂತೆ ಮಾಡಿದರು. ಹರಿದಾಸರ ಪದಗಳು ಮತೀಯ ಚೌಕಟ್ಟಿನಲ್ಲಿ ಇದ್ದರೂ ಸಾರ್ವತ್ರಿಕವಾಗಿ ಸಾಮಾನ್ಯ ಜನಜೀವನ, ರೀತಿ–ನೀತಿಗಳನ್ನು ನಡೆ–ನುಡಿಗಳನ್ನು ತಿಳಿಸಿಕೊಡುತ್ತವೆ. ಈ ಕಾರಣದಿಂದ ಇವು ಹೆಚ್ಚು ಜನಪ್ರಿಯವೂ ಆಗಿವೆ. ಕೆಲವು ವೈದಿಕವಿದ್ವಾಂಸರಲ್ಲಿದ್ದಂತೆ ಡಂಭಾಚಾರ, ಬೂಟಾಟಿಕೆ ಇವು ದಾಸರಲ್ಲಿರಬಾರದೆಂದು "ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು ದಾಸನೆಂದು ತುಳಸೀಮಾಲೆ ಧರಿಸಿ ತಿರುಗಾಡುವವ ದಾಸನಲ್ಲ" ಎಂದು ಎಚ್ಚರಿಸಿ, "ದಾಸರೆಂದರೆ ಪುರಂದರದಾಸರಯ್ಯ" ಎಂದು ಹೊಗಳಿ ಅವರ ನಡೆ–ನುಡಿ, ರೀತಿ–ನೀತಿಗಳನ್ನು ಆದರ್ಶವಾಗಿಟ್ಟುಕೊಳ್ಳಬೇಕೆಂದು ತಿಳಿಸಿದ್ದಾರೆ.

ವ್ಯಾಸರಾಜರು ಬರೆದ ಗ್ರಂಥಗಳಲ್ಲಿ ಈಗ ೯ ಉಪಲಬ್ಧವಿವೆ. 1) ತಾತ್ಪರ್ಯಚಂದ್ರಿಕಾ 2) ನ್ಯಾಯಾಮೃತ 3) ತರ್ಕತಾಂಡವ 4) ಭೇದೋಜ್ಜೀವನ 5 – 8) ತತ್ತ್ವವಿವೇಕ-ಖಂಡನತ್ರಯ – ಟಿಪ್ಪಣಿ 9) ವೇದಾಂತ ಸಂಗ್ರಹ ಖಂಡನ ಮೊದಲಿನ 3 ಗ್ರಂಥಗಳು 'ವ್ಯಾಸತ್ರಯ' ಎಂದೇ ಪ್ರಸಿದ್ಧವಾಗಿವೆ. ಅಖಂಡನೀಯ, ಪ್ರೌಢಭಾಷೆಯಿಂದ ಕೂಡಿದ, ತಾತ್ಪರ್ಯ ಚಂದ್ರಿಕಾ, ಗ್ರಂಥವನ್ನು ಇವರು ರಚಿಸಿದ್ದರಿಂದ ಇವರಿಗೆ 'ಚಂದ್ರಿಕಾಚಾರ್ಯ'ರೆಂದೇ ಹೆಸರು ಪ್ರಸಿದ್ಧವಾಗಿದೆ. ಕೇವಲ ಈ ಗ್ರಂಥಗಳ ಅಭ್ಯಾಸ ಮಾಡಿದವರನ್ನೇ ಉದ್ದಾಮಪಂಡಿತರೆಂದು ನಾವು ಕರೆಯುತ್ತಿರುವಾಗ ಈ ಗ್ರಂಥಕರ್ತೃ ವ್ಯಾಸರಾಜರ ಪಾಂಡಿತ್ಯ ಪ್ರತಿಭೆಗಳ ಬಗ್ಗೆ ಏನೆಂದು ಹೇಳಬೇಕು ?

ಸೋಮನಾಥ ಕವಿಯು ತಿಳಿಸಿದಂತೆ ವ್ಯಾಸರಾಜರು 32 ಜಲಾಶಯಗಳನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ. ಇವರು ಭಾರತದಾದ್ಯಂತ ಒಟ್ಟು 732 ಪ್ರಾಣದೇವರ ಪ್ರತಿಮೆಗಳನ್ನು ಸ್ಥಾಪಿಸಿದರು. ವಿವಿಧೆಡೆಗಳಲ್ಲಿ ಅನೇಕ ವಿದ್ಯಾಪೀಠಗಳನ್ನು ಸ್ಥಾಪಿಸಿ ವಿದ್ಯಾಪ್ರಸಾರ ಮಾಡಿದರು. ಇತರ ಮಹನೀಯರಂತೆ ಮಹಾಮಹಿಮರಾದ ವ್ಯಾಸರಾಜರೂ ಅನೇಕ ಪವಾಡಗಳನ್ನು ತೋರಿಸಿದ್ದಾರೆ. ಹೀಗೆ ವ್ಯಾಸರಾಜರು ಹತ್ತು ಹಲವಾರು ಮುಖಗಳಿಂದ ಸಾಮಾಜಿಕ ಸೇವೆಯನ್ನು ಮಾಡಿದರು.

ಶ್ರೀ ವ್ಯಾಸರಾಜರ ಬಗ್ಗೆ ಒಂದೇ ಮಾತಿನಲ್ಲಿ ಹೇಳುವುದಾದರೆ "ಈಸು ಮುನಿಗಳಿದ್ದೇನು ಮಾಡಿದರು। ನಮ್ಮ ವ್ಯಾಸಮುನಿ ಮಧ್ವಮತವನುದ್ಧರಿಸಿದ" ಎಂಬ ಪುರಂದರದಾಸರ ಸುಳಾದಿಯನ್ನು ಉದಹರಿಸಬೇಕು. ವ್ಯಾಸರಾಜರು ಮಧ್ವ ಸಿದ್ಧಾಂತಕ್ಕೆ ನೀಡಿದ ಕೊಡುಗೆಯನ್ನು ಯಾರೂ ಮರೆಯುವಂತಿಲ್ಲ. ಅಷ್ಟೇ ಅಲ್ಲ ವಿಶ್ವತೋಮುಖ ವ್ಯಕ್ತಿತ್ವದ ವ್ಯಾಸರಾಜರು ಮಾಡಿದ ಉಪಕಾರವನ್ನು ಎಷ್ಟು ಸ್ಮರಿಸಿದರೂ ಸಾಲದು.

ಶ್ರೀ ವೇದವ್ಯಾಸ–ಆನಂದತೀರ್ಥರ ಸತ್ ಸಿದ್ಧಾಂತವನ್ನು ಆಳವಾಗಿ ಅಭ್ಯಸಿಸಿ, ಅತಿ ಪ್ರೌಢಗ್ರಂಥ ರಚಿಸಿ, ದ್ವೈತಸಿದ್ಧಾಂತ ಪ್ರಸಾರ ಮಾಡಿ ಪರಮತೀಯರ ಗೌರವಕ್ಕೂ ಪಾತ್ರರಾಗಿ ಅಭಿನವವ್ಯಾಸರೆನಿಸಿದ, ವಿಜಯನಗರ ಸಿಂಹಾಸನವೇರಿ ರಾಜರಾಗಿ ಮೆರೆದ, ತಿರುಪತಿ ದೇವಸ್ಥಾನ ಬಿಟ್ಟುಕೊಟ್ಟು ವೈರಾಗ್ಯ ಶಿಖಾಮಣಿಗಳೆನಿಸಿದ, ದಾಸಕೂಟಪ್ರವರ್ತಕರಾದ ಅಗಮ್ಯಮಹಿಮರಾಗಿ ಶ್ರೀ ವ್ಯಾಸರಾಜಗುರುವರೇಣ್ಯರ ಪುಣ್ಯದಿನ ಫಾಲ್ಗುಣ ಬಹುಳ ಚತುರ್ಥೀ ದೇಶಾದ್ಯಂತ ಆಚರಿಸಲ್ಪಡುವ ಪದ್ಧತಿ ಇದೆ. ಈ ಮೂಲಕವಾಗಿ ಕನ್ನಡದ ಜನತೆ ಅವರನ್ನು ಅವರ ಕೊಡುಗೆಯನ್ನು ನೆನೆಸಿಕೊಳ್ಳುವುದು ಶ್ಲಾಘನೀಯ. ಆದರೂ ವ್ಯಾಸರಾಜರ ಕೃತಿಗಳ ಅಧ್ಯಯನ, ಪ್ರಸಾರಗಳು ಹೆಚ್ಚು ಹೆಚ್ಚಿಗೆ ಆಗದಿರುವುದು ಒಂದು ಕೊರತೆಯೆಂದೇ ಹೇಳಬೇಕು.



ವೇದಾಂತದೇಶಿಕರು —

# ವ್ಯಾಖ್ಯಾನ ಕೃತಿಗಳು

‘ಕವಿತಾರ್ಕಿಕಸಿಂಹ’ ರೆಂಬ ಬಿದುದಾಂಕಿತರಾದ ಶ್ರೀದೇಶಿಕರ ಪಾಂಡಿತ್ಯ ವೈದುಷ್ಯಗಳಿಗೆ ಅವರ ಕಾವ್ಯ ಮತ್ತು ದಾರ್ಶನಿಕ ಗ್ರಂಥಗಳು ಎಷ್ಟು ಕಾರಣವೋ ಅವರ ಭಾಷ್ಯ ಮತ್ತು ವ್ಯಾಖ್ಯಾನ ಗ್ರಂಥಗಳೂ ಅಷ್ಟೇ ಕಾರಣವೆಂದು ನಿಸ್ಸಂದೇಹವಾಗಿ ಹೇಳಬಹುದು. ವ್ಯಾಖ್ಯಾನಕಾರ್ಯವು ಸ್ವಂತ ರಚನೆಗಿಂತ ಹೆಚ್ಚು ಪ್ರಯಾಸಕರ. ಅದಕ್ಕೆ ಸ್ವಂತಕೃತಿ ರಚನೆಗಿಂತ ಹೆಚ್ಚು ಪಾಂಡಿತ್ಯವೂ ಲೋಕಾನುಭವವೂ ಆವಶ್ಯಕ. ಮೊದಲು ಮೂಲಕರ್ತೃವಿನೊಡನೆ ಸಹೃದಯತೆಯನ್ನು ಪಡೆಯಬೇಕು. ವ್ಯಾಖ್ಯಾನಕಾರರು ಮೂಲಗ್ರಂಥದ ಸರಿಯಾದ ಅರ್ಥವನ್ನು ಗ್ರಹಿಸುವುದಲ್ಲದೆ ಪೂರ್ವಾಪರ ಪ್ರಸಂಗಗಳನ್ನು ಸಮನ್ವಯಗೊಳಿಸಿ, ಸಾಧಕಭಾಧಕಗಳನ್ನು ವಿಮರ್ಶಿಸಿ, ವಿರೋಧಗಳನ್ನು ಪರಿಹರಿಸಿ ಎಲ್ಲರಿಗೂ ಅರ್ಥವಾಗುವಂತೆ ವಿವರಿಸಬೇಕು. ಮೂಲಕಾರರ ಆಶಯಗಳನ್ನು ಇತರ ಆಕರಗಳ ವಾಕ್ಯದಿಂದ ಸಮರ್ಥಿಸಿ ಸ್ಪಷ್ಟಗೊಳಿಸಬೇಕು. ಸಂದೇಹ ಬಂದ ವಿಷಯವನ್ನು ವ್ಯಾಖ್ಯಾನಕಾರರು ಹಾಗೆಯೇ ಬಿಡದೆ ಮೂಲದ ಇತಿಮಿತಿಗಳನ್ನರಿತು ತನ್ನ ಸ್ವಂತ ಅಭಿಪ್ರಾಯಗಳಿಂದ ಊಪೋದ್ವಲವನ್ನು ಕಲ್ಪಿಸಬೇಕು. ವೇದಾಂತದೇಶಿಕರಿಗೆ ‘ಗುರುಂ ಪ್ರಕಾಶಯೇತ್ ಧಿಯಾನ್’ ಎಂಬ ನ್ಯಾಯದ ಪ್ರಕಾರ ತಮ್ಮ ಆಚಾರ್ಯ ಮತ್ತು ಪ್ರಾಚಾರ್ಯರುಗಳಾದ ರಾಮಾನುಜ ಮತ್ತು ಯಾಮುನರಿಂದ ಪ್ರತಿಪಾದಿಸಲ್ಪಟ್ಟ ವಿಶಿಷ್ಟಾದ್ವೈತವು ನಿರ್ದುಷ್ಟವೂ ಸ್ಫಟಿಕ ಶುದ್ಧವೂ ಆದುದೆಂದು ಸಿದ್ಧಾಂತಗೊಳಿಸುವುದೇ ಪರಮಧ್ಯೇಯ. ಆದುದರಿಂದ ಅವರು ತಮ್ಮ ವ್ಯಾಖ್ಯಾನಗಳನ್ನು ಬಹುಮಟ್ಟಿಗೆ ಅನುಸರಿಸಿದ್ದರೂ ಅವುಗಳನ್ನು ಸಂಪೂರ್ಣವಾಗಿ ವಿಮರ್ಶಿಸಿ, ಸಂಗ್ರಹವಾದುದನ್ನು ವಿಶದಪಡಿಸಿ, ಮೇಲೆ ತೋರಬಹುದಾದ ಪರಸ್ಪರ ವಿರೋಧವನ್ನು ಪರಿಹಾರಮಾಡಿ, ಪೂರ್ವಾಚಾರ್ಯರುಗಳಲ್ಲಿ ಕಂಡುಬರುವ ಭಿನ್ನಾಭಿಪ್ರಾಯಗಳನ್ನು ಸಮಂಜಸಪಡಿಸಿ, ಇತರ ಆಕರಗಳಿಂದ ಪುಷ್ಟೀಕರಿಸಿ, ಮೂಲ ಸಂಪ್ರದಾಯವನ್ನು ಉದಾಸೀನಮಾಡದೆ ಸುಲಭ ಶೈಲಿಯಲ್ಲಿ ರಚಿಸಿದ್ದಾರೆ. ಪೂರ್ವಾಚಾರ್ಯರು ಪ್ರಸ್ಥಾನತ್ರಯಗಳಾದ ಬ್ರಹ್ಮಸೂತ್ರ, ಉಪನಿಷತ್ ಮತ್ತು ಭಗವದ್ಗೀತೆಗಳ ವಿಷಯವಾಗಿ ರಚಿಸಿರುವ ಗ್ರಂಥಗಳಿಗೇ ಸಾಮಾನ್ಯವಾಗಿ ಇವರು ವ್ಯಾಖ್ಯಾನಗಳನ್ನು ರಚಿಸಿರುವರು. ಇಲ್ಲಿ ಸಂಗ್ರಹವಾಗಿ ಉಕ್ತವಾಗಿರುವ ವಿಷಯಗಳ ವಿಶದೀಕರಣ ಮತ್ತು ಸಮರ್ಥನ ಅಂದರೆ ವಾದವಿವಾದಗಳಿಗೆ ನ್ಯಾಯಸಮ್ಮತವಾದ ಉತ್ತರ ಮತ್ತು ಸಿದ್ಧಾಂತ ನಿರ್ಧಾರಣ ಇವುಗಳೇ ಪರಮಧ್ಯೇಯ. ಹಾಗೆಯೇ ದೇಶಿಕರ ತಾತ್ಪರ್ಯ ಗ್ರಹಣ ಶಕ್ತಿ ಅತ್ಯದ್ಭುತವಾದುದು. ಮೂಲ ಗ್ರಂಥಕ್ಕೆ ತಕ್ಕ ಪೀಠಿಕೆಯನ್ನು ರಚನೆಮಾಡಿ ಮಧ್ಯೆ ಮಧ್ಯೆ ಪ್ರತಿಪಾದ್ಯ ವಿಷಯಗಳು ಭಿನ್ನವಾದಾಗ ಪೂರ್ವಾಪರ ಅಂಶಗಳಿಗೆ ಸಂಬಂಧ ಕಲ್ಪನೆಮಾಡುವ ವಿಧಾನವು ಬಹು ಶ್ಲಾಘ್ಯವಾಗಿದೆ. ಪ್ರತಿಯೊಂದು ಗ್ರಂಥದ ಪ್ರಾರಂಭದಲ್ಲಿಯೂ ಮತ್ತು ಅದರೊಳಗಿನ ಪ್ರತಿಯೊಂದು ಶ್ಲೋಕ ಮತ್ತು ಗದ್ಯ ಭಾಗಕ್ಕೂ ಒಂದು ಪೀಠಿಕೆ ಅಥವಾ ಪೂರ್ವಾಪರಸಂಬಂಧ ನಿರೂಪಣೆ ಇರುತ್ತದೆ. ವ್ಯಾಖ್ಯೇಯ ವಿಷಯವು ವಿವಾದಾಸ್ಪದವಾಗಿರುವೆಡೆಗಳಲ್ಲಿ ದೇಶಿಕರು ಪ್ರತಿಯೊಂದು ಮತವನ್ನು ಗಂಭೀರವಾದ ಮಟ್ಟದಲ್ಲಿ ವಿಮರ್ಶಿಸಿ, ಸಿದ್ಧಾಂತವನ್ನು ನಿರೂಪಿಸಿರುವುದಲ್ಲದೆ ಒಂದೊಂದು ಪುಟದಲ್ಲಿಯೂ ಸಂಗ್ರಹ ಶ್ಲೋಕಗಳನ್ನು ರಚಿಸಿರುವುದು ಆಚಾರ್ಯರ ವೈಶಿಷ್ಟ್ಯ. ಪ್ರತಿಪಾದ್ಯ ವಿಷಯಗಳಿಗೆ ಸಂಬಂಧಿಸಿದಂತೆ ಹಿಂದಿನ ಶ್ರುತಿ ಸ್ಮೃತ್ಯಾದಿ ಆಕರಗ್ರಂಥಗಳಿಂದ ಆಧಾರ ವಾಕ್ಯಗಳನ್ನು ಉದ್ಧರಿಸುವುದರಲ್ಲಿ ದೇಶಿಕರ ಸಾಮರ್ಥ್ಯ ಅದ್ವಿತೀಯವಾದುದು. ಅವರ ಗ್ರಂಥ ಪರಿಚಯದ ವೈಶಾಲ್ಯವೂ ಸ್ಮರಣಶಕ್ತಿಯ ತೀಕ್ಷ್ಣತೆಯೂ ಆಶ್ಚರ್ಯಾವಹವಾಗಿದೆ.

ವೇಂಕಟನಾಥರು ಸಂಸ್ಕೃತದಲ್ಲಿ ನಾಲ್ಕು ಭಾಷ್ಯಗಳನ್ನು ನಾಲ್ಕು ವ್ಯಾಖ್ಯಾನಗಳನ್ನೂ ರಚಿಸಿದ್ದಾರೆ. ವ್ಯಾಖ್ಯಾನಗಳಲ್ಲಿ ಆಚಾರ್ಯರ ‘ತತ್ತ್ವಟೀಕೆ’ ಪ್ರಧಾನವಾದುದು. ಇದು ಶ್ರೀ ರಾಮಾನುಜಾಚಾರ್ಯರ ‘ಶ್ರೀಭಾಷ್ಯ’ದ ವಿವರಣೆ. ಇದರಲ್ಲಿ ವಿಶಿಷ್ಟಾದ್ವೈತದರ್ಶನದ ಆಧ್ಯಾತ್ಮ ತತ್ತ್ವಗಳೆಲ್ಲ ಬಹು ವಿಶದವಾಗಿ ನಿರೂಪಿತವಾಗಿವೆ. ಇದು ಸುದರ್ಶನಾಚಾರ್ಯರ “ಶ್ರುತಪ್ರಕಾಶಿಕೆ”ಗಿಂತ ಒಂದು ಹೆಜ್ಜೆ ಮುಂದುವರಿದು ಅಲ್ಲಿ ಸಂಗ್ರಹವಾಗಿ ಉಕ್ತವಾಗಿರುವುದನ್ನು ವಿವರಿಸುವ ಉದ್ದೇಶದಿಂದ ರಚಿತವಾದುದು. ಇದು ವಾಸ್ತವವಾಗಿ ಹಲ ಪ್ರವಚನಗಳ ಪರಿಪಕ್ವಫಲ. ದುಂದೃಷ್ಟವಶಾತ್ ಅದು ಶ್ರೀಭಾಷ್ಯದ ಮಹಾಸಿದ್ಧಾಂತ ಪ್ರತಿಪಾದನೆಯ ಮಧ್ಯಭಾಗದಲ್ಲಿ ನಿಂತುಹೋಗಿದೆ. ಆಚಾರ್ಯರು ಕಾರಣಾಂತರದಿಂದ ಇದನ್ನು ಮುಗಿಸಲಾಗಲಿಲ್ಲವೆಂದು ತೋರುತ್ತದೆ. ಶ್ರೀ ಭಾಷ್ಯಕ್ಕಿರುವ ಅನೇಕ ವ್ಯಾಖ್ಯಾನಗಳಲ್ಲಿ ‘ತತ್ತ್ವಟೀಕೆ’ಯು ಪರಮೋತ್ತಮವಾದುದೆಂದು ನಿಸ್ಸಂದೇಹವಾಗಿ ಹೇಳಬಹುದು.

ಡಾ॥ ಎನ್. ಅನಂತರಂಗಾಚಾರ್ಯ

(31 ನೇ ಪುಟ ನೋಡಿ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ ರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ನಿಂದಾಸ್ತುತಿ

ಶ್ರೀಹರಿಯು ಸರ್ವೋತ್ತಮ ಎನ್ನುವುದು ಹರಿದಾಸರ ಅಚಲನಿಲುವು. ಎಂದೇ ಅವರು ಅವನನ್ನು ನಾನಾವಿಧವಾಗಿ ಭಾವಪರವಶರಾಗಿ ಹೃದಯ ತುಂಬಿ ಹಾಡಿ ಹೊಗಳಿರುವರು. ಅಂತಹವುಗಳಲ್ಲಿ "ನಿಂದಾ-ಸ್ತುತಿ"ಯೂ ಒಂದು, ಹರಿದಾಸ ಸಾಹಿತ್ಯದಲ್ಲಿ ಸಿಗುವ ವೈಶಿಷ್ಟ್ಯಪೂರ್ಣವಾದ ಭಕ್ತಿವಾಣಿ ಈ "ನಿಂದಾಸ್ತುತಿ" ಯಾಗಿದೆ. ಹರಿದಾಸರಿಗೆ ಹರಿಯಲ್ಲಿ ಅಪಾರವಾದ ಭಕ್ತಿ. ಅವರು ಅಪಾರವಾದ ಭಕ್ತಿ ಹೊಂದಿದಾಗ ಅವನೊಡನೆ ಸಲುಗೆಯ ಮಾತನಾಡುತ್ತಿದ್ದರು. ಅವನ ದರ್ಶನಕ್ಕಾಗಿ ಪರಿಪರಿಯಾಗಿ ದೀನರಾಗಿ ಬೇಡಿ ಪರಿತಪಿಸುತ್ತಿದ್ದರು. ಅವರಿಗೆ ಅವನ ದರ್ಶನ ಲಾಭ ದೊರೆಯದಿದ್ದಾಗ, ಅವನನ್ನು ಕಾಣಬೇಕೆಂಬ ಹಠ, ಹಂಬಲ, ಅವನ ಮೇಲೆ ಕ್ಷಣಕಾಲದ ಕ್ರೋಧಭಾವವಾಗಿ ಪರಿಣಮಿಸುತ್ತಿತ್ತು. ಆಗ ಅವನ ಗುಣಗಳನ್ನೇ ಅವಗುಣಗಳನ್ನಾಗಿ ವ್ಯಂಗ್ಯವಾಗಿ ವರ್ಣಿಸಿ ಅವನ ಕೃಪೆಗಾಗಿ ಸ್ತುತಿಸುತ್ತಿದ್ದರು. ಅದೇ "ನಿಂದಾ-ಸ್ತುತಿ" ಎಂದು ಪ್ರಸಿದ್ಧವಾಗಿರುವುದು. ಇದನ್ನೇ "ವ್ಯಾಜಸ್ತುತಿ" ಎಂದೂ ಕರೆಯುತ್ತಾರೆ. "ನಿಂದಾ-ಸ್ತುತಿ" ಎಂದರೆ ನಿಂದೆಯ ರೂಪದಲ್ಲಿರುವ ಭಗವಂತನ ಸ್ತೋತ್ರ ಎಂದರ್ಥ. ಈ ನಿಂದಾಸ್ತುತಿಯಲ್ಲಿ ಕಹಿ, ಕೋಪ, ತಾಪ, ದ್ವೇಷ ಯಾವುದೂ ಇಲ್ಲ. ಈ ಸ್ತುತಿ ಮೇಲುನೋಟಕ್ಕೆ ವಿಚಿತ್ರವಾಗಿ ತೋರುತ್ತದೆ. ಆದರೆ ಅದರ ಅಂತರಾಳವನ್ನು ಹೊಕ್ಕು ನೋಡಿದರೆ ಭಕ್ತನ ಮನಸ್ಸಿಗೆ, ಅವನಿಗೆ ಆ ಆರಾಧ್ಯದೇವತೆಯಲ್ಲಿರುವ ಅಚಲ ನಿಲುವಿಗೆ ಅದೊಂದು ಹಿರಿಯ ಸಾಕ್ಷಿಯಾಗಿ ನಿಲ್ಲುತ್ತದೆ. ಇಂತಹ ಸ್ತುತಿಗಳಲ್ಲಿ ಹಾಸುಹೊಕ್ಕಾಗಿರುವ ಹಾಸ್ಯವೂ ಕೂಡಾ ಆ ದೇವರ ಹೆಚ್ಚುಗಾರಿಕೆಯನ್ನೇ ಸಾರುತ್ತದೆ. ಈ ನಿಂದಾಸ್ತುತಿಯ ಅಲಂಕಾರವನ್ನು ಬಳಸಿ ಹರಿದಾಸರು ಹರಿಯಲ್ಲಿ ತಮಗಿರುವ ಅಚಲ ಭಕ್ತಿಭಾವವನ್ನು ವ್ಯಕ್ತಪಡಿಸಿರುತ್ತಾರೆ. ದಾಸ ಸಾಹಿತ್ಯದಲ್ಲಿ ಹರಿಯನ್ನು ಕುರಿತು ಮಾಡಿರುವ ನಿಂದಾಸ್ತುತಿಗಳು ಅಗಣಿತವಾಗಿವೆ. ಅವುಗಳಲ್ಲಿ ಕೆಲವು ಸ್ವಾರಸ್ಯವಾದ ನಿಂದಾಸ್ತುತಿಗಳನ್ನು ಇಲ್ಲಿ ಗಮನಿಸಲಾಗಿದೆ.

ಹರಿದಾಸರಿಗೆ ವಿಷ್ಣುವಿನ ದಶಾವತಾರದ ವರ್ಣನೆ ಎಂದರೆ ಪಂಚಪ್ರಾಣ. ಅವರು ಹರಿಯ ಮೇಲ್ಮೆಯನ್ನು ನಿರೂಪಿಸಲು ದಶಾವತಾರಗಳನ್ನು ಸುಂದರವಾಗಿ ಬಳಸಿಕೊಂಡಿರುವರು. ವಿಷ್ಣುವಿನ ಮಹಿಮೆಯ ನಿರೂಪಣೆಗೆ ಹರಿದಾಸ ಸಾಹಿತ್ಯದಲ್ಲಿ ಒಂದು ಪ್ರತ್ಯೇಕವಾದ ಸ್ಥಾನವುಂಟು. "ನಿಂದಾಸ್ತುತಿ"ಯಲ್ಲಿಯೂ ದಶಾವತಾರದ ವರ್ಣನೆ ಉಂಟು. ಕನಕದಾಸರು ದಶಾವತಾರಗಳ ಲೀಲಾ ವಿನೋದವನ್ನು ತಮ್ಮದೇ ಆದ ವಿಶಿಷ್ಟ ಧಾಟಿಯಲ್ಲಿ ವರ್ಣಿಸಿರುವುದನ್ನು ನೋಡಿ:

ಧೀರ ಸೋಮುಕ ವೇದ ಚೋರನ
ಮಡುಹಿದೆ
ವಾರಿಧಿಗಿಳಿದ ಪರ್ವತವ ಪೊತ್ತೆ
ಧಾರಿಣಿಯನು ತಂದು ದನುಜದಲ್ಲಣನಾದೆ
ನಾರಸಿಂಹ ನಿನಗೆ ನಮೋ ಎಂದೆನಲ್ಲದೆ

ನೀರಪೊಕ್ಕವನೆಂದೆನೆ-ಬೆನ್ನಿನ ಮೇಲೆ
ಭಾರ ತಾಳ್ದವನೆಂದೆನೆ ಮಣ್ಣನಗಿದು
ಬೇರ ಮೆದ್ದವನೆಂದೆನೆ
ರಕ್ಕಸರೊಳು ಧರೆಯ ದಾನವ ಬೇಡಿ
ನೆಲವ ಮೂರಡಿ ಮಾಡಿ

ಪರಶು ಹಿಡಿದು ಕ್ಷತ್ರಿಯರ ಸವರಿ
ಚರಣದಿ ಪಾಷಾಣ ಹೆಣ್ಣು ಮಾಡಿದ
ಪುಣ್ಯ
ಚರಿತ ಯಾದವಪತಿ ಶರಣೆಂದೆನಲ್ಲದೆ
ತಿರುಕ ಹಾರುವನೆಂದೆನೆ ಹೆತ್ತತಾಯ
ಶಿರಕೆ ಮುನಿದವನೆಂದನೆ ವನದೇಶದಿ
ಧುರಕೆ ನಿಂದವನೆಂದೆನೆ ಪೂತನಿ ಮೊಲೆಯ
ಹರಿದು ಕೊಂದವನೆಂದು
ಸ್ತುತಿಸಿದೆನಲ್ಲದೆ

ಚಿತ್ತಜ ಕೋಟಿಲಾವಣ್ಯ ಮುಪ್ಪುರ
ದೊಳು
ಉತ್ತಮ ಸ್ತ್ರೀಯರ ವ್ರತವಳಿದೆ
ಮತ್ತೆ ಕಲ್ಕಿಯಾದೆ ಮಲೆತರ ಮಡುಹಿದೆ
ಉತ್ತಮ ಶ್ರೀರಾಮನೆಂದು ಸ್ತುತಿಸಿದೆ
ನಲ್ಲದೆ

ಬತ್ತಲೆ ನಿಂದವನೆಂದೆನೆ ತೇಜಿಯನೇರಿ
ಒತ್ತಿ ಬಹವನೆಂದೆನೆ ಬಾರಿಬಾರಿಗೆ
ಸತ್ತು ಹುಟ್ಟಿದವನೆಂದೆನೆ ಆದಿಕೇಶವ
ಹತ್ತವತಾರದ ಹರಿಯೆಂದೆನಲ್ಲದೆ

**ಶ್ರೀ ಕೆ.ಎಂ. ಅಚ್ಯುತಕುಮಾರ**
ಎಂ.ಎ ;

ಈ ಕೀರ್ತನೆಯಲ್ಲಿ ಕನಕದಾಸರು ದಶಾವತಾರದ ವರ್ಣನೆಯನ್ನು ನೂತನವಾಗಿ, ಚಿತ್ತಾಕರ್ಷಕವಾಗಿ ಸ್ತುತಿಸಿರುವುದನ್ನು ನೋಡಬಹುದು. ಪುರಂದರದಾಸರ ನಿಂದಾಸ್ತುತಿಯಲ್ಲಿ-

ಜಲದೊಳು ಪೊಕ್ಕಡಗಿರಲು
ಬಲುಗಿರಿಯನೆ ಪೊತ್ತುಭಾರವೆಂದೆನಲು
ತಲೆಕುಕ್ಕಿ ನೆಲಕೆ ಬಗ್ಗಿರಲು
ಹಲ್ಲ ಕಿರಿಕಿರಿದರಿಯೆನೆಂದೆನಲು ಸಾಲಿಗರು
ಬಿಡುವರೆ ?

ಮತ್ಸ್ಯ, ಕೂರ್ಮ, ವರಾಹ, ನರಸಿಂಹಾವತಾರಗಳ ವೃತ್ತಾಂತ ಬಂದಿರುವುದನ್ನು ಗಮನಿಸಬಹುದು. ಪುರಂದರದಾಸರ 'ಇವಗೇಕೆ ಶೃಂಗಾರ, ಇವಗೇಕೆ ಬಂಗಾರ, ಕಾಡುಕರಡಿಯಂತೆ ಪೋಲುವ ದೇಹಕ್ಕೆ' ಎನ್ನುವ ಕೀರ್ತನೆಯಲ್ಲಿ ನಿಂದೆ ಕಾಣಿಸಿಕೊಂಡಿದ್ದರೂ

ಮುಂದಿನ ಸಾಲುಗಳಲ್ಲಿ ವಿಷ್ಣುವಿನ ದಶಾವತಾರಗಳ ಚಿತ್ರಮಾಲಿಯನ್ನೇ ಕಾಣಬಹುದು. 'ನೀರೊಳಗೆ ಮುಳುಗಿದವನಿಗೆ ಪರಿಮಳ ಗಂಧವೇಕೆ?' ಎಂಬಲ್ಲಿ ಮತ್ಸ್ಯಾವತಾರ, 'ಭಾರಹೊತ್ತವಗೆ ಪನ್ನೀರು ಏಕೆ' ಎಂಬಲ್ಲಿ ವರಾಹ ಅವತಾರ, 'ಕೋರೆದಾಡೆಯ ಘೋರಮುಖಕೇಕೆ ಕನ್ನಡಿ' ಎಂಬಲ್ಲಿ ಕೂರ್ಮಾವತಾರ, 'ಕರುಳಹಾರ ಧರಿಸಿದವಗೆ ಹಾರಪದವೇಕೆ' ಎಂಬಲ್ಲಿ ನರಸಿಂಹಾವತಾರ, 'ನೆಲವನಳೆದವಗೆ ಕಾಲಕಿರುಗೆಜ್ಜೆ ಏಕೆ' ಎಂಬಲ್ಲಿ ವಾಮನಾವತಾರ, 'ತಲೆ ತಾಯಿ ತರಿದವನಿಗೆ ಮರಿಯಾದೆ' ಎಂಬಲ್ಲಿ ಪರಶುರಾಮಾವತಾರ, 'ಚೇಲಾರುವೆ ಉಟ್ಟವಗೇಕೆ ಪೀತಾಂಬರ' ಎಂಬಲ್ಲಿ ರಾಮಾವತಾರ, 'ಪಾಲ ಕದ್ದು ಕುಡಿದವಗೆ ಕುಸುಮ ಕೇಸರಿಯೇಕೆ' ಎಂಬಲ್ಲಿ ಕೃಷ್ಣಾವತಾರ, 'ಬತ್ತಲೆ ನಿಂತವಗೆ ಕಸ್ತೂರಿತಿಲಕವೇಕೆ' ಎಂಬಲ್ಲಿ ಬುದ್ಧಾವತಾರ, 'ಹಯವೇರಿದವಗೆ ಪುಷ್ಪವೇಕೆ' ಎಂಬಲ್ಲಿ ಕಲ್ಕಿ ಅವತಾರದ ವರ್ಣನೆ ಬಂದಿದೆ.

ವಿಷ್ಣುವಿನ ಸಾಹಸದ ಕಥೆಗಳನ್ನು ಪುರಂದರದಾಸರು ಸುಂದರವಾಗಿ ಬಳಸಿಕೊಂಡಿರುವುದನ್ನು ಈ ಕೆಳಗಿನ ಕೀರ್ತನೆಯಲ್ಲಿ ಕಾಣಬಹುದು.

ನೀರೊಳಗಾಡಿ ಮೈ ಒರೆಸೆಂದಳುತಾನೆ  
ಮೇರುವ ಹೊತ್ತು ಮೈಭಾರ  
ವೆಂದಳುತಾನೆ  
ಧರೆಯನೆಗಹಿ ತನ್ನ ದಾಡೆ  
ನೊಂದಳುತಾನೆ  
ದುರುಳ ರಕ್ಕಸನ ಕರುಳು ಕಂಡಳುತಾನೆ  
ನೆಲವನಳೆದು ಪುಟ್ಟಚರಣ  
ನೊಂದಳುತಾನೆ  
ಜಲದಿಂದ ಕೊಡಲಿಯ ಹಿಡಿವೆ  
ನೆಂದಳುತಾನೆ  
ಬಲುಗವಿಗಳಕಂಡು  
ಅಂಜಿಕೊಂಡಳುತಾನೆ  
ನೆಲದಿಂದ ಬೆಣ್ಣೆ ಕೈ ನಿಲುಕದು  
ಎಂದಳುತಾನೆ  
ಬಟ್ಟಬತ್ತಲೆ ನಿಂತು ಎತ್ತಿಕೋ  
ಎಂದಳುತಾನೆ  
ಶ್ರೇಷ್ಠ ತೇಜಿಯನು ಹತ್ತಿಸು  
ಎಂದಳುತಾನೆ

ಈ ಕೀರ್ತನೆಯಲ್ಲೂ ಮತ್ಸ್ಯ, ಕೂರ್ಮ, ವಾಮನ ಮೊದಲಾದ ಹತ್ತು ಅವತಾರಗಳ ಕಥೆ ನಿರೂಪಿತವಾಗಿದೆ. ಇಲ್ಲಿ ಹರಿ ತನ್ನ ದಶಾವತಾರಗಳಲ್ಲಿ ಮಾಡಿದ ಕಾರ್ಯಗಳೆಲ್ಲವರ ವರ್ಣನೆ ಹೃದ್ಯವಾಗಿ ಚಿತ್ರಿತವಾಗಿದೆ.

ಗೋಪಾಲದಾಸರು ತಮ್ಮದೊಂದು ನಿಂದಾಸ್ತುತಿಯ ಕೀರ್ತನೆಯಲ್ಲಿ ವಿಷ್ಣುವಿನ ದಶಾವತಾರಗಳನ್ನು

ಏಕೆ ಮಲಗಿಹೆ ಹರಿಯೆ ಏಸು ಆಯಾಸ  
ಜೋಕೆ ಮಾಡುವ ಬಿರುದು  
ಸಾಕಾಯಿತೇನೋ  
ತಮ್ಮನೊಡನೆ ಹೋರಾಡಿ ತಪಿಸಿ  
ಮೈಬೆವರಿತೊ (ಮತ್ಸ್ಯಾವತಾರ)  
ಅಮೃತಮಥನದಿ ಗಿರಿಯು  
ಅತಿಭಾರವಾಯ್ತೊ (ಕೂರ್ಮಾವತಾರ)  
ರಮಣಿಯನು ತರುವಾಗ ರಣರಂಗ  
ಬಹಳಾಯ್ತೋ (ವರಾಹಾವತಾರ)  
ಅಮರರಿಪುವನು ಸೀಳೆ  
ಆಯಾಸವಾಯ್ತೊ (ನರಸಿಂಹಾವತಾರ)  
ಆಕಾಶ ಭೇದಿಸಲು ಕಾಲು ಉಳಿಕಿತೋ  
(ವಾಮನಾವತಾರ)  
ಕಾಕುನೃಪರನು ಸೀಳಿ ಕರಸೋತಿತೋ  
(ಭಾರ್ಗವಾವತಾರ)  
ಭೂದೇವಿಯನರಸಿ ಬಳಲಿಕೆಯು  
ಬಹಳಾಯ್ತೊ (ರಾಮಾವತಾರ)  
ಲೋಕಭಾರವ ಇಳುಹಿ  
ಸಾಕು ಸಾಕಾಯ್ತೊ (ಕೃಷ್ಣಾವತಾರ)  
ಚಪಲೆಯರ ಮೋಹಿಸಲು ಉಪಟಳವು  
ಬಹಳಾಯ್ತೊ (ಬುದ್ಧಾವತಾರ)  
ಅಪವಿತ್ರರನಡಗಿಸಲು ಅಧಿಕ  
ಶ್ರಮವಾಯ್ತೊ (ಕಲ್ಕಿಅವತಾರ)  
ಕೃಪೆ ಮಾಡಿ ನೋಡಯ್ಯ ಕಣ್ಣುತೆರೆದು  
ಕಪಟನಾಟಕ ಶ್ರೀ ಗೋಪಾಲವಿಠಲ

– ಎಂದು ಚಿತ್ರಿಸಿರುವರು.

ದಾಸರು ದಶಾವತಾರಗಳನ್ನು ಸಾಲಿಗ – ಮೂಲಿಗ ವ್ಯವಹಾರಕ್ಕೆ ಹೋಲಿಸಿ ಚಿತ್ರಿಸಿರುವುದು ಸೊಗಸಾಗಿದೆ. ಭಗವಂತ ಸಾಲಗಾರ. ಭಕ್ತನೇ ಮೂಲಿಗ. 'ಸಾಲ ಕೇಳದೇ ಹೋಯಿತು. ಹೊಲ ನೋಡದೆ ಹೋಯಿತು' ಎನ್ನುವ ಗಾದೆ ಇದ್ದದ್ದೇ. ಎಂದೇ ಭಕ್ತನು ಭಗವಂತನನ್ನು ಕೊಟ್ಟ ಸಾಲವನ್ನು ಕೇಳಿದಾಗ ಎಂತೆಂತಹ ವೇಷಗಳನ್ನು ಹಾಕಿದನೆಂದು ಪುರಂದರದಾಸರು ದಶಾವತಾರಗಳನ್ನು ಚಿತ್ರಿಸುವರು.

ಭರದಿ ಕೇಳಲು ಜಲದಿ ಕಣ್ಣು  
ಬಾಯಿ ಬಿಡುತಾನೆ (ಮತ್ಸ್ಯ)  
ತರುಬಿ ಕೇಳಲು ಕಲ್ಲು ಹೊತ್ತೈದಾನೆ  
(ಕೂರ್ಮ)  
ಉರುಬಿ ಕೇಳಲು ಊರು ಅಡವಿ  
ಯೊಳಗಿರುತಾನೆ (ವರಾಹ)  
ಇರುಳು ಹಗಲಲಿ ಕಾಣಿಸಿಕೊಳುತಾನೆ  
(ನರಸಿಂಹ)  
ಕಂಡು ನಿಲ್ಲಿಸಲೊಂದು  
ಕಾಲಿನಲಿ ನಿಲುತಾನೆ (ವಾಮನ)  
ಕೊಂಡ ಸಾಲಕೆ ಕೊಡಲಿ  
ಹಿಡಿವುತಾನೆ (ಪರಶುರಾಮ)  
ತೊಂಡರಾಣೆಯೆನಲು ವನವಾಸವೈದಾನೆ  
(ಶ್ರೀರಾಮ)  
ಭಂಡತನದಲ್ಲಿ ಠಕ್ಕು ನಡೆಸ್ಯಾಡುತಾನೆ  
(ಶ್ರೀಕೃಷ್ಣ)  
ಕೊಟ್ಟು ಬೈಯಲು ಲಜ್ಜೆ ಹೇವವನು  
ತೊರೆವುತಾನೆ (ಬುದ್ಧ)  
ಕೊಟ್ಟು ಹೋಗೆನಲು ಕಲಿಯಾಗುತಾನೆ  
(ಕಲ್ಕಿ)  
ಸೃಷ್ಟಿಗೊಡೆಯ ಶ್ರೀರಂಗಪಟ್ಟಣದ  
ಪುರಂದರ  
ವಿಠಲೇಶನು ನಮ್ಮ ಪಶ್ಚಿಮ  
ರಂಗನಾಥನು

ಈ ಕೀರ್ತನೆಯ ಕೊನೆಯ ಎರಡುಸಾಲುಗಳಲ್ಲಿ ಶ್ರೀರಂಗಪಟ್ಟಣದ ಪಶ್ಚಿಮರಂಗನಾಥಸ್ವಾಮಿಯನ್ನು ಸ್ತುತಿಸಿರುವರು, ರಂಗನಾಥನು ಕೊಡಬೇಕಾದ ಬಡ್ಡಿಹಣವನ್ನು

(26 ನೇ ಪುಟ ನೋಡಿ)



# ತೀರ್ಥಕ್ಷೇತ್ರ ದರ್ಶನ

# ವೇಣು ಗೋಪಾಲಸ್ವಾಮಿ ದೇವಾಲಯ

ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ವೈಭವದ ಶಿಖರವನ್ನು ಮುಟ್ಟಿದ್ದಾಗ, ಅದರ ಆಶ್ರಿತರಾಜ್ಯ ಚಂದ್ರಗಿರಿಯನ್ನು ವೆಂಕಟಪತಿರಾಯರು ಪಾಲಿಸುತ್ತಾ ಸಾಮಂತರಾಗಿದ್ದರು. ಚಂದ್ರಗಿರಿಗೆ ಮೂಡಲ ಬಾಗಿಲು, ಕೋಲಾಹಲಪುರ, ಬೂದಿಹಾಳ ಮುಂತಾದ ಪಾಳೆಪಟ್ಟುಗಳು ಸೇರಿದ್ದು, ಚಂದ್ರಗಿರಿ ಸಾಮಂತರಾಜನಿಗೆ ಅವರು ಕಪ್ಪಕಾಣಿಕೆ ಕೊಡುತ್ತಿದ್ದರು.

ಕೋಲಾಹಲ ಪುರದಲ್ಲಿ ರಾಮಪ್ಪನಾಯಕ ಎಂಬುವನು ಶ್ರೇಷ್ಠ ಮಟ್ಟದ ಆಡಳಿತವನ್ನು ನಡೆಸುತ್ತಾ ಧರ್ಮಾಭಿಮಾನಿಯಾಗಿ ವೈಷ್ಣವ ಸಾಂಪ್ರದಾಯವುಳ್ಳ ವಿಷ್ಣು ಭಕ್ತನಾಗಿದ್ದನು.

ವಿಜಯನಗರದ ಅರಸರು ತಮ್ಮ ಪಟ್ಟಾಭಿಷೇಕೋತ್ಸವದ ನೆನಪಿಗಾಗಿ ಚಂದ್ರಗಿರಿಗೆ ಸೇರಿದ ಘಟಿಕಾಚಲ, ( ಈಗಿನ ಶೋಳಂಗೂರು ) ಎಂಬ ಪುಣ್ಯ ಕ್ಷೇತ್ರದಲ್ಲಿ ಶ್ರೀ ಕೃಷ್ಣ ದೇವಾಲಯ ನಿರ್ಮಿಸಿ, ದಾನದತ್ತಿ ನೀಡಿ, ಧರ್ಮ ಪ್ರಚಾರ ನಿರಂತರ ನಡೆಯುವಂತೆ ಮಾಡಿದ್ದರು- ಈ ಅಂಶ ಈಗಲೂ ಅಲ್ಲಿರುವ ಹಳಗನ್ನಡ-ತೆಲುಗು ಶಿಲಾ ಶಾಸನಗಳಿಂದ ವ್ಯಕ್ತವಾಗುತ್ತದೆ.

ಚಂದ್ರಗಿರಿಗೆ ಕಪ್ಪ ನೀಡಲು ಹೋಗುತ್ತಿದ್ದ ಕೋಲಾಹಲಪುರದ ರಾಮಪ್ಪ ನಾಯಕರು, ದೇವಾಲಯದ ವೈಭವ ಕಂಡು, ಈ ದೇವರನ್ನೇ ತಮ್ಮ ಪಾಳಯದಲ್ಲೂ ಸ್ಥಾಪಿಸಿದರೆ, ತಾವೂ ಅದರ ಪ್ರಭಾವದಿಂದ ಭವ್ಯವಾಗಿ ಪಾಳೆಗಾರಿಕೆ ನಡೆಸಬಹುದೆಂದು ಮನದಲ್ಲಿ ಆಲೋಚಿಸಿ ; ಪಾಳೆಯಕ್ಕೆ ವಾಪಸ್ ಬಂದ ಮೇಲೆ ಪುಷ್ಕರಿಣಿ, ಕಲ್ಯಾಣಮಂಟಪ, ರಥಮಂಟಪ ಚಿತ್ರಗೋಪುರಗಳು ವಿಶಾಲವಾದ ಮೈದಾನ, ಪ್ರಾಕಾರಗಳನ್ನೊಳಗೊಂಡ ದೇವಾಲಯವನ್ನು ನಿರ್ಮಿಸಿ, ರಾತ್ರೋ ರಾತ್ರಿ ಅಶ್ವಾರೂಢರಾಗಿ ಹೋಗಿ ( ಘಟಿಕಾಚಲಕ್ಕೆ ) ಶ್ರೀಯವರ ಮೂರ್ತಿಗಳನ್ನು ಕಿತ್ತು ತಂದು ಪುಷ್ಕರಿಣಿಯಲ್ಲಿ ಜಲಾಧಿವಾಸಕ್ಕೆ ಇಟ್ಟರೆಂದೂ, ಚಕ್ರವರ್ತಿಗಳಿಗೆ ಸುದ್ದಿ ಮುಟ್ಟಿ, ಅವರು ರಾಮಪ್ಪನಾಯಕನನ್ನು ಕರೆಸಿ ಕೇಳಿದರೆಂದೂ, ತಪ್ಪು ಒಪ್ಪಿಕೊಳ್ಳದ ರಾಮಪ್ಪ ನಾಯಕನನ್ನು ಆನೆಯ ಕಾಲಿಗೆ ಕಟ್ಟಿ ಎಳೆಸಿದರೆಂದೂ ಪ್ರತೀತಿ. ಆದರೆ ಇದಕ್ಕೆ ದಾಖಲೆಗಳ ಸಾಕ್ಷ್ಯಗಳಿಲ್ಲ.

ಈಗಲೂ ಇಲ್ಲಿನ ಶಕ್ತಿ ದೇವಾಲಯದಲ್ಲಿ ರಾಮಪ್ಪ ನಾಯಕರ ಅಶ್ವಾರೂಢ ಪ್ರತಿಮೆಯಿದ್ದು, ನಾಯಕರ ಸಾಹಸಗಳ ಬಗ್ಗೆ ಅವನ ಜೀವನ ಚರಿತ್ರೆಯ ಬಗ್ಗೆ ವಯಸ್ಸಾದವರು ಕಥೆಗಳನ್ನು ಹೇಳುತ್ತಾರೆ. ಗಲಟ ಭೂ ದಾಖಲೆಗಳಲ್ಲಿ ಈಗಿನ ಆಗ್ರೋ ಇಂಡಸ್ಟ್ರೀಸ್ ಪ್ರದೇಶವನ್ನು ಗುರಿಕಾರ ರಾಮಪ್ಪ ನಾಯಕರ ಕೆರೆ ಹಾಗೂ ಗುರಿಕಾರರ ಶೃಂಗಾರ ತೋಪು ಎಂಬುದಾಗಿ ಗುರುತಿಸಿರುವುದು ಕಾಣಬಹುದು.

ರಾಮಪ್ಪ ನಾಯಕನು ಕಾಲವಾದ ನಂತರ ದೇವಾಲಯದ ಕೆಲಸ, ಪ್ರತಿಷ್ಠಾಪನೆ ಸ್ಥಗಿತಗೊಂಡಿತ್ತು. ಸುಮಾರು ನೂರಿನ್ನೂರು ವರ್ಷಗಳ ಕಾಲ.

ಈಗ್ಗೆ ಸುಮಾರು ಇನ್ನೂರು ವರ್ಷಗಳ ಹಿಂದೆ ಕೋಲಾರ ತಾಲ್ಲೂಕಿನ ಬೀಚಗೊಂಡನಹಳ್ಳಿಯಲ್ಲಿ ವಿಷ್ಣು ಭಕ್ತರೂ, ಸಮಾಜ ಸೇವಾ ನಿರತರೂ ಧರ್ಮಭೀರುವೂ ಆದ ಭಾರತಿ ನಾರಾಯಣಪ್ಪ ಎಂಬುವರು ಶ್ಯಾನುಭೋಗರಾಗಿದ್ದರು. ಕೋಲಾಹರಪುರಕ್ಕೆ ಒಮ್ಮೆ ಬಂದಿದ್ದ ನಾರಾಯಣಪ್ಪನವರಿಗೆ ಪುಷ್ಕರಿಣಿಯಲ್ಲಿ ವೇಣು ಗೋಪಾಲಮೂರ್ತಿಗಳು ಕಂಡು, ಪ್ರತಿಷ್ಠಾಪಿಸುವಂತೆ ಅಶರೀರವಾಣಿ ಕೇಳಿಸಿತೆಂದೂ, ಅವರು ಹಲವರ ಸಹಕಾರದಿಂದ ಶ್ರೀಯವರ ವಿಗ್ರಹಗಳನ್ನು ಹೊರತೆಗೆದು ಪ್ರತಿಷ್ಠಾಪನೆ ಮಾಡಿ ಹರಿ



ರುಕ್ಮಿಣೀ ಸತ್ಯಭಾಮಾ ಸಮೇತ ಶ್ರೀ ವೇಣುಗೋಪಾಲಸ್ವಾಮಿ ಚಿತ್ರ : ಜೆ. ಪಿ.

ಸೇವೆ ಗೈಯುತ್ತಾ 'ಹರಿಭಕ್ತಸಾರಾಮೃತ,' 'ಮಾಧವ ವಿಜಯ' ಮೊದಲಾದ ಗ್ರಂಥಗಳನ್ನು ರಚಿಸಿ, ಧರ್ಮ ಪ್ರಚಾರ ಮಾಡುತ್ತಿದ್ದರು ಎಂಬುದು ಅವರೇ ರಚಿಸಿರುವ "ಮಾಧವ ವಿಜಯ" ದಿಂದ ಕಂಡುಬರುತ್ತೆ.

೧೮೬೦ ರಲ್ಲಿ ದಾಸವರೇಣ್ಯ ತುಲಸೀ ರಾಮ ದಾಸರು ದೇಶ ಪರ್ಯಟನೆ ಕಾಲದಲ್ಲಿ ಕೋಲಾರಕ್ಕೆ ಬಂದು, ರುಕ್ಮಿಣಿ ಸತ್ಯಭಾಮಾ ವೇಣುಗೋಪಾಲ ದೇವರ ದರ್ಶನ ಪಡೆದು, ಶ್ರೀ ಕೃಷ್ಣೋತ್ಸವ ಮೊದಲಾದುವನ್ನು ನಡೆಸುತ್ತಾ, ದೇವಾಲಯದ ಆಡಳಿತ ನಡೆಸುತ್ತಿದ್ದರು. ಪೂಜಾದಿ ಕೈಂಕರ್ಯಗಳು ನಿರಂತರವಾಗಿ ನಡೆಯಲು ಶಿಷ್ಯನಾದ ಚೊಕ್ಕ ಓಬಳೇಶಪ್ಪನಿಂದ ಹಾಗೂ ಇತರರಿಂದ ದೇವಾಲಯಕ್ಕೆ ಜಮೀನು ದಾನವಾಗಿ ಪಡೆದರು. ಕೃಷ್ಣೋತ್ಸವ ಮತ್ತಿತರ ಕಾರ್ಯಕ್ಕೆ ಸಹಕಾರ ನೀಡಿದವರ ಹೆಸರುಗಳು ರಾಮದಾಸರ ಕೀರ್ತನೆಗಳಲ್ಲಿ ಕಂಡುಬರುತ್ತವೆ.

ಭಕ್ತಿ ಭಾವದ ಹಲವು ಕೀರ್ತನೆಗಳನ್ನು ರಾಮದಾಸರು ರಚಿಸಿದ್ದು (ತೆಲುಗಿನಲ್ಲಿ) ಈಗಲೂ ಅವು ಈ ಪ್ರದೇಶದಲ್ಲಿ ಜನಪ್ರಿಯವಾಗಿವೆ. ರಾಮ ದಾಸರು ಸುತ್ತ ಮುತ್ತಲ ಹಳ್ಳಿಗಳಲ್ಲಿ ಈ ವೇಣು ಗೋಪಾಲ ಮಂದಿರವನ್ನು ಕೇಂದ್ರವಾಗಿಟ್ಟು ಕೊಂಡು ಕೃಷ್ಣೋತ್ಸವ ನಡೆಸಿ, ಅಲ್ಲಲ್ಲಾ ವೇಣು ಗೋಪಾಲ ದೇವಾಲಯಗಳನ್ನು ಮಲ್ಲಂಡಹಳ್ಳಿ, ಹರಿಟಿ, ಪಟ್ನ, ಕೋಡಗಲ್ಲು, ಕಾಮದೇನಹಳ್ಳಿ ಮುಂತಾದ ಕಡೆ ನಿರ್ಮಿಸಿದರು ಎಂದು ತಿಳಿದು ಬರುತ್ತದೆ.

ದೇವಾಲಯ ನಿರ್ಮಾಣದಲ್ಲಿ ಹೆಚ್ಚಿನ ಶಿಲ್ಪ ಕಲಾ ನೈಪುಣ ಕಾಣಬರದಿದ್ದರೂ, ಸಾಲಗ್ರಾಮ ಶಿಲೆಯಲ್ಲಿ ಮಾಡಿರುವ ರುಕ್ಮಿಣಿ, ಸತ್ಯಭಾಮಾ ಸಮೇತ ವೇಣುಗೋಪಾಲ ದೇವರ ಮೂರ್ತಿಗಳು ದಕ್ಷಿಣಾದಿ ಶಿಲ್ಪಕ್ಕೆ ಸೇರಿದ್ದು, ಶಿಲ್ಪ ಕಲಾ ನೈಪುಣ್ಯದ ಶ್ರೇಷ್ಠ ನಿದರ್ಶನಗಳಾಗಿವೆ.

ದೇವಾಲಯದಲ್ಲಿ ಗರ್ಭಗುಡಿಯ ಬಲ ಭಾಗಕ್ಕೆ ಶಂಖಚಕ್ರ ಗದಾಧಾರಿಯಾಗಿ ಅಭಯ ಹಸ್ತ ಕಟಿ ಹಸ್ತಗಳಿಂದ ಕೂಡಿದ ಚೋಳರ ಕಾಲದ ಉತ್ತರಾರ್ಧದಲ್ಲಿ ರೂಪುಗೊಂಡಿರಬಹುದಾದ ಎರಡು ಅಡಿ ಎತ್ತರದ ಸುಂದರ ಶ್ರೀನಿವಾಸ ವಿಗ್ರಹವಿದೆ. ಅಲ್ಲದೆ ಪಂಚಲೋಹದ ಉತ್ಸವ ವಿಗ್ರಹಗಳು, ತಾಮ್ರದ ಮೂರ್ತಿಗಳು, ಸುದರ್ಶನ ಚಕ್ರ ಇವೆ. ವೈಖಾನಸಾಗಮರೀತ್ಯಾ ಪೂಜಾದಿಗಳು ನಡೆಯುತ್ತವೆ.

ದೇಗುಲವು ಇತ್ತೀಚಿಗೆ ಶಿಥಿಲಾವಸ್ಥೆಗೆ ಬಂದಿದ್ದು, ಈಗ ಭಕ್ತಾದಿಗಳ ನೆರವಿನಿಂದ ಜೀರ್ಣೋದ್ಧಾರವಾಗಿದೆ.

**ಜೆ.ಪಿ.**

# ನಡವಳಿಕೆಗಳು

—'ರಸಿಕ ಪುತ್ತಿಗೆ'

ನಮ್ಮನ್ನು ಮಾನವ, ಮನುಷ್ಯರೆಂದು ಯಾಕೆ ಹೆಸರಿಸುತ್ತಾರೆಂದು ಯೋಚಿಸತೊಡಗಿ ಬಹಳ ವರ್ಷಗಳು ಸಂದುವು. ಕೆಲವು ಜನ ಹೇಳಿದರು ; "'ಮಾನ' ಇರೋದ್ರಿಂದ ಮನುಷ್ಯರೂ ಅಂತ ಹೇಳುತ್ತಾರೆ"—ಅಂತ. ಅದು ಸರಿ ಕಾಣಿಸ ಲಿಲ್ಲ. ಮಾನ ಇಲ್ಲದವರೂ ಮನುಷ್ಯರೇ. ಅವರಿಗೆ 'ಮಾನ ಇಲ್ಲದವರು' ಅಂತ ಹೇಳ ಬಹುದು, ಅಷ್ಟೇ. ಹಾಗಾದರೆ 'ಮನುಷ್ಯ' ಎಂಬ ಹೆಸರು ಯಾಕೆ ಬಂತು ? ಬಹಳ ದಿನಗಳ ನಂತರ ನನಗೆ ಅನ್ನಿಸಿದ್ದು ಹೀಗೆ : ನಮಗೆ ಮನಸ್ಸು ಇದೆ. 'ಮನಸ್ಸು' ಎಂಬ ತತ್ತ್ವ ಅನ್ನೋಣವೇ ? ಶಕ್ತಿ ಅನ್ನೋಣವೆ ? ವಸ್ತು ವಂತೂ ಅಲ್ಲ. ಆ ಮನಸ್ಸು ಇದ್ದುದರಿಂದಲೇ ನಾವು ಮನುಷ್ಯ, ಮಾನವ, ಎಂಬ ಅಭಿದಾನಕ್ಕೆ ಅರ್ಹರಾಗಿರಬೇಕು. ಅಲ್ಲವೆ ? ನಾವು ಮನುಕುಲ ದವರು, ಹಾಗಾಗಿ ಮನುಜರು, ಅಂದರೆ ಮನುವಿ ನಿಂದ ಹುಟ್ಟಿದವರು, ಆದರಿಂದ ಮಾನವರು, ಎಂಬೆಲ್ಲ ಪೌರಾಣಿಕ ವಾದವೂ ಇದಿರಿಗೆ ನಿಂತಿತು. ಅದನ್ನು ಒಪ್ಪಲಾರೆನೆಂದು ನನ್ನ ಚಿತ್ತ — ಅಹಂಕಾರಗಳು ಹೇಳಿದವು. ನನ್ನ ಬುದ್ಧಿಗೂ ಅದು ಸರಿಬರಲಿಲ್ಲ. ಇಲ್ಲಿ 'ನನ್ನ' ಎಂಬ ಪದ ಬಳಸುವಾಗ 'ನಾನು' ಎಂಬ ಒಂದು ತತ್ತ್ವದ ಭಾಸ ಉಂಟಾಗುತ್ತದೆ. ಆ 'ನಾನು' ಆತ್ಮ ಇರಬಹುದು, ಜೀವ ಇರಬಹುದು; ಪರಮಾತ್ಮನ ಅಂಶ ಇರಬಹುದು– ಅಥವಾ 'ಮನಸ್ಸು' ಆಗಿರ ಬಹುದು. ಸದ್ಯಕ್ಕೆ 'ನಾನು' = 'ಮನಸ್ಸು' ಎಂದೇ ಸಮೀಕರಿಸಬೇಕು. ಯಾಕೆಂದರೆ ಆತ್ಮ, ಜೀವ, ಪರಮಾತ್ಮನ ಅಂಶ, ಪ್ರಾಣಿಗಳಲ್ಲಿಯೂ, ಸಸ್ಯಗಳಲ್ಲಿಯೂ ಇರುತ್ತದೆಯಂತೆ. ಪರಮಾತ್ಮನು ಸಕಲ ಸಚರಾಚರ ಪ್ರಾಣಿಗಳಲ್ಲಿಯೂ—ವಸ್ತು ಗಳಲ್ಲಿಯೂ ವ್ಯಾಪ್ತನಲ್ಲವೆ ? ಹಾಗಾಗಿ ಪ್ರಾಣಿ ಗಳಲ್ಲಿ ಇಲ್ಲದ ಒಂದೇ ಒಂದು ತತ್ತ್ವವೆಂದರೆ 'ಮನಸ್ಸು'. ಹಾಗಾಗಿ ಪ್ರಾಣಿಗಳು ಮನುಷ್ಯರಲ್ಲ. ಮನುಷ್ಯರು ಪ್ರಾಣಿಗಳಲ್ಲ. ಇವೆಲ್ಲ ತರ್ಕಕ್ಕೆ ನಿಲುಕುವ ಸಂಗತಿಗಳಾದರೂ ಈ ನಿಟ್ಟಿನಲ್ಲಿ ನಾವು ಸಾಕಷ್ಟು ಚಿಂತನ ಮಾಡಬೇಕು. ಸದ್ಯಕ್ಕೆ ಮನುಷ್ಯನಿಗೆ ಮನಸ್ಸು ಇರುವುದರಿಂದಲೇ ಆತ ಮಾನವ, ಮನುಷ್ಯನೆಂದೆನಿಸಿಕೊಂಡ ಎಂದು ತಿಳಿದುಕೊಂಡರೆ ಸಾಕು.

'ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ' ಎಂಬ ಒಂದು ಸೂಕ್ತಿ ನೆನ ಪಾಗುತ್ತದೆ. ಇದರರ್ಥ : ಮನುಷ್ಯರ ಬಂಧ— ಮೋಕ್ಷಗಳಿಗೆ ಮನಸ್ಸೇ ಕಾರಣ. ಬಂಧ— ಮೋಕ್ಷದಂತಹ ಶಾಸ್ತ್ರದ ಶಬ್ದಗಳನ್ನು ಕಂಡು ಗಾಬರಿ ಪಡಬೇಕಿಲ್ಲ. ಮೋಕ್ಷಕ್ಕೆ ನಿಘಂಟು ಕೊಡುವ ಅರ್ಥ 'ಬಿಡುಗಡೆ' ಈಗ ನಮಗೆ ಬಂಧನ—ಬಿಡುಗಡೆಯ ಅರ್ಥ ಚೆನ್ನಾಗಿ ಗೊತ್ತಾ ಗುತ್ತದೆ. ಇನ್ನೂ ಸರಳವಾಗಿ ಹೇಳುವುದಾದರೆ ಸುಖ, ದುಃಖಗಳಿಗೆ ನಮ್ಮ ಮನಸ್ಸೇ ಕಾರಣ ಎಂದು ತಿಳಿದುಕೊಳ್ಳಬಹುದು.

ಸುಖ ಅಂದರೆ ಏನು ? ದುಃಖ ಅಂದರೆ ಏನು ? ಎಂಬ ಸಂಗತಿಯ ವ್ಯಾಖ್ಯಾನವಿವರಣ ಇಲ್ಲಿ ಅಪ್ರಸ್ತುತ. ಪ್ರಸ್ತುತ, ಮನಸ್ಸು ಇರುವುದರಿಂದಲೇ ನಮ್ಮನ್ನು ಮಾನವ, ಮನುಷ್ಯ ಎಂದು ಗುರುತಿಸ ಲಾಗಿದೆ. ಅದೇ ನಮ್ಮ ಸುಖ ದುಃಖಕ್ಕೆ ಕಾರಣ ಎಂಬ ಸಂಗತಿ ಮುಖ್ಯ. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತವೆಂಬ ಪದಗಳನ್ನು ನಾವು ಕೇಳಿದ್ದೇವೆ. ಇವುಗಳೇನು ? ಇವು ಯಾವು ದನ್ನು ಸೂಚಿಸುತ್ತವೆ ? ಎಂದು ನಾವು ತಿಳಿಯ ಬೇಕು.

ಮನಸ್ಸಿನ ಇತರ ಹಂತಗಳಾಗಿ ಬುದ್ಧಿ, ಅಹಂಕಾರ, ಚಿತ್ತಗಳು ಇವೆ ಎಂದು ಆಧುನಿಕ ಮನೋವಿಜ್ಞಾನಿಗಳೂ, ಯೋಗ ಶಾಸ್ತ್ರಕಾರರೂ ತಿಳಿಸುತ್ತಾರೆ. ಇಲ್ಲಿ ಭಾರೀ ಪದಗಳನ್ನು ಬಳಸುವ ಬದಲು ಸರಳವಾಗಿ ನಾವು ಯೋಚಿ ಸುವುದಾದರೆ ; ಒಂದು ಸಂಗತಿ ನಮ್ಮ ಇಂದ್ರಿಯ ಗಳ ಮೂಲಕ ಮನಸ್ಸಿಗೆ 'ಬರು'ತ್ತದೆ. ನಂತರ ಬುದ್ಧಿಗೆ ದಾಟುತ್ತದೆ. ಅಹಂಕಾರ ಅದನ್ನು ತನ್ನಂತೆ ಪರಿಶೀಲಿಸಿ ಚಿತ್ತದಲ್ಲಿ ನೆಲೆ ನಿಲ್ಲಿ ಸುತ್ತದೆ. ಚಿತ್ತವು ನಂತರದ ಬಳಕೆಗೆ ಬೇಕಾದಾಗ ಬೇಕಾದಷ್ಟನ್ನು ಬುದ್ಧಿಗೆ ಸೂಸುತ್ತದೆ. ಚಿತ್ತದ ವೃತ್ತಿಯಂತೆ ಕ್ರಿಯೆಗಳು ನಡೆಯುತ್ತವೆ.

ಯೋಗಶಾಸ್ತ್ರಕಾರನಾದ ಪತಂಜಲಿಯು— ಮನ, ಬುದ್ಧಿ, ಅಹಂಕಾರಗಳ ಕ್ರಿಯೆಯಲ್ಲಿ ಸಮತೋಲ ಸ್ಥಾಪಿಸುವ ಸಲುವಾಗಿ ಹೇಳುವ ಮೊದಲ ಸೂತ್ರ : 'ಯೋಗವೆಂದರೆ ಚಿತ್ತ ವೃತ್ತಿಯ ನಿರೋಧ' ಎಂದು. ವಿವರಣೆ ಭಾರ ವಾಯಿತೆ ? ಸರಳಗೊಳಿಸುವ.

ಹೊಸತಾಗಿ ಒಬ್ಬ ಭೋರ್ಗರೆವ ಕಡಲನ್ನು ಕಾಣುತ್ತಾನೆ. ಆಗ ಮನಸ್ಸು ಬೆರಗಾಗುತ್ತದೆ ಬುದ್ಧಿ ಕಡಲಿನ ಕುರಿತಾದ ವಿವರಗಳನ್ನು ಸಂಗ್ರಹಿಸುತ್ತದೆ. ಆ ವಿವರಗಳಿಂದ ಅಹಂಕಾರವು ತನಗೆ ಬೇಕಾದ ತನ್ನ ರಕ್ಷಣೆ — ಉಪಯೋಗ ಗಳಿಗೆ ಅಗತ್ಯಬರುವ ಅಂಶಗಳನ್ನು ಗ್ರಹಿಸಿ ಚಿತ್ತಕ್ಕೆ ರವಾನಿಸುತ್ತದೆ. ಮುಂದೆ ಕಡಲನ್ನು ಕಂಡಾಗ ಪ್ರಾರಂಭದಲ್ಲಿ ಕಂಡಹಾಗಿನ 'ಬೆದರು', ಇರುವುದಿಲ್ಲ ; 'ಬೆರಗು' ಇರುವುದಿಲ್ಲ. ಚಿತ್ತವು ಸಂಗ್ರಹಿಸಿದ ಈ ರೀತಿಯ ವಿವರಗಳನ್ನು ಅನುಭವ ಎನ್ನಬಹುದು. ನಾವು ಮೊದಲ ಸಲ ಯಾವುದೋ ಒಂದು ದೇವಾಲಯವನ್ನು ಪ್ರವೇಶಿ ಸುತ್ತೇವೆ. ಅಲ್ಲಿನ ಪೂಜೆ, ಧೂಪ, ದೀಪ, ಪೂಜಾರಿ, ವಿಗ್ರಹ, ಮಂತ್ರ, ಆಭರಣ ಇತ್ಯಾದಿ ಗಳನ್ನು ಮನಸ್ಸು ಇಂದ್ರಿಯಗಳ ಮೂಲಕ ಗ್ರಹಿಸುತ್ತದೆ. ಮತ್ತೆ ಯಥಾಕ್ರಮದಲ್ಲಿ ಮನಸ್ಸು–ಬುದ್ಧಿ–ಅಹಂಕಾರ ಚಿತ್ತಗಳು ಕೆಲಸ ಮಾಡುತ್ತವೆ. ದೇವರು, ದೇವಾಲಯಗಳ ಬಗೆಗೆ ಅದೇ ನಮ್ಮ ಮೊದಲ ಅನುಭವವಾದರೆ ಒಂದು ವಿಧದಲ್ಲಿ ಚಿತ್ತವು ಹರ್ಷಗೊಳ್ಳುತ್ತದೆ ಅದು ಹಳೆಯ ಅನುಭವವಾದರೆ ಇನ್ನೊಂದು ವಿಧದಲ್ಲಿ ಚಿತ್ತವು ವರ್ತಿಸುತ್ತದೆ. ನಮ್ಮ ಮನಸ್ಸೋ, ಬುದ್ಧಿಯೋ, ಅಹಂಕಾರವೋ, ಚಿತ್ತವೋ ಈ ನಾಲ್ಕರಲ್ಲಿ ಯಾವುದಾದರೂ ಒಂದು ಉಲ್ಲಸಿತವಾಗಿಲ್ಲದಿದ್ದರೆ ನಾವು ದೇವಾಲ ಯಕ್ಕೆ ಹೋದುದೇ ನೆನಪಿರುವುದಿಲ್ಲ. ನೆನಪಿದ್ದರೂ ಅಲ್ಲಿನ ವಿವರಗಳು ನೆನಪಿರುವುದಿಲ್ಲ. ವಿವರಗಳು ನೆನಪಿದ್ದರೂ ಯಾಕೋ ನಮಗೆ ಸರಿ ಬೀಳುವು ದಿಲ್ಲ. ಇದಕ್ಕೆಲ್ಲ ಏನು ಕಾರಣ ? ಬಹುಶಃ ದೇವಾಲಯದಲ್ಲಿರುವಾಗ ನಮ್ಮ ಮನಸ್ಸು ನೆಮ್ಮದಿಯಿಂದ ಇರಲಿಲ್ಲ. ಇದ್ದರೂ ಬುದ್ಧಿಗೆ ಅದರ ಗ್ರಹಿಕೆ ಸಾಧ್ಯವಾಗಲಿಲ್ಲ. ಸಾಧ್ಯ

ವಾದರೂ ಅಹಂಕಾರ ಅದನ್ನು ಪರಿಶೀಲಿಸಲಿಲ್ಲ. ಹಾಗೊಮ್ಮೆ ಪರಿಶೀಲಿಸಿದರೂ ಚಿತ್ತ ಸ್ಥಿರವಾಗಿ ಸ್ವೀಕರಿಸಲಿಲ್ಲ. ಇದೇ ಉದಾಹರಣೆಯನ್ನು ನಾವು ಸಿನೆಮಾ ನೋಡುವುದು, ತರಗತಿಯಲ್ಲಿ ಪಾಠ ಕೇಳುವುದು, ಭಾಷಣ ಕೇಳುವುದು, ಇತ್ಯಾದಿಗಳಲ್ಲಿ ಹೋಲಿಸಬಹುದು.

ನಮ್ಮ ವರ್ತನೆಯಲ್ಲಿ ಚಿತ್ತದ ಅಧಿಕಾರ ಅಧಿಕ. ಚಿತ್ತವು ಮನ, ಬುದ್ಧಿ, ಅಹಂಕಾರಗಳಿಂದ ಪರಿಪೋಷಿತ ಇವುಗಳು ಸರಿಯಾದ ಕ್ರಮದಲ್ಲಿ ಪ್ರವರ್ತಿಸದಿದ್ದರೆ ನಾವು–

"ಮನಸ್ಸಿಗೆ ಬಂದಹಾಗೆ ನಡೀತಾನೆ. ಬುದ್ಧಿ ಇಲ್ಲದವನಂತೆ ಮಾತಾಡ್ತಾನೆ. ಅಹಂಕಾರದಿಂದ ವರ್ತಿಸ್ತಾನೆ. ಚಿತ್ತ ಸ್ವಾಸ್ಥ್ಯ ಕಳಕೊಂಡಿದ್ದಾನೆ"—ಎಂಬೆಲ್ಲ ಮಾತುಗಳನ್ನು ಬೇರೆ ಬೇರೆ ಹಂತಗಳಲ್ಲಿ ಕೇಳಬೇಕಾಗುತ್ತದೆ.

ಒಟ್ಟಿನಲ್ಲಿ ಮನಸ್ಸಿನ ಮುಂದಿನ ಮೂರು ಹಂತಗಳು ಅಥವಾ ಚಿತ್ತದ ಹಿಂದಿನ ಮೂರು ಹಂತಗಳು ಸರಿಯಾಗಿ, ವಿಕಸನಗೊಂಡು, ಸಮರ್ಪಕವಾಗಿ ವರ್ತಿಸದಿದ್ದರೆ ಅಥವಾ ಯಾವುದಾದರೂ ಒಂದು ಅಥವಾ ಎರಡು ಹಂತಗಳು ಸರಿಯಾಗಿ ಕೆಲಸ ಮಾಡದಿದ್ದರೆ ಒಂದನೇ ಹಂತದಿಂದ ನಾಲ್ಕನೇ ಹಂತಕ್ಕೆ, ಒಂದನೇ ಹಂತದಿಂದ ಮೂರನೇ ಹಂತಕ್ಕೆ ಸಂಗತಿಗಳು ಧಾವಿಸಿ ನಮ್ಮ ವರ್ತನೆಯಲ್ಲಿ ಏರುಪೇರು ಉಂಟಾಗಬಹುದು. ಮನಸ್ಸಿನ ಮಿಕ್ಕ ಮೂರು ಹಂತಗಳು ತೆಪ್ಪಗೆ ಕುಳಿತು 'ಮನಬಂದಂತೆ' ನಮ್ಮ ವರ್ತನೆಯು ಬದಲಾಯಿಸುವ ಭಯವೂ ಇರಬಹುದು. ಹಾಗಾಗಿ ಪರಿಪೂರ್ಣ ಮಾನವನ ಮನಸ್ಸಿನ ಎಲ್ಲ ಹಂತಗಳೂ ಸರಿಯಾಗಿ ಕೆಲಸ ಮಾಡಬೇಕು. ಇಲ್ಲದಿದ್ದರೆ ಜೀವನ ವನವಾಗಬಹುದು. ಮಾನವನ ಮಾನ ಹೋಗಬಹುದು. ಚಿತ್ತವೃತ್ತಿಯ ನಿರೋಧವೆಂದರೆ ಇದು. ಈಗ ಬಹುಶಃ ನಾವು ನಮ್ಮ 'ನಡವಳಿಕೆ' ಗಳಿಗೆ ಮೂಲ ಬಿಂದುವನ್ನು ಕಂಡುಕೊಂಡ ಹಾಗಾಯಿತು.

ನಮ್ಮ ದೇಶ ಭಕ್ತಿಗೆ ಬಹಳ ಬೆಲೆ ಕೊಡುವ ಪರಂಪರೆಯಲ್ಲಿ ಬೆಳೆದುದು. ಭಕ್ತಿಮಾರ್ಗದಲ್ಲಿ ಶಿಸ್ತು ಅಗತ್ಯ. ಭಕ್ತಿಯ ಬೀಜವನ್ನು ಬಾಲ್ಯದಲ್ಲೇ ಮನಸ್ಸು ಶ್ಮೈಗಳಿಗೆ ಬಿತ್ತಿ, ಬೆಳಸಿ ಅವು ಬುದ್ಧಿ–ಅಹಂಕಾರಗಳನ್ನು ದಾಟಿ ಚಿತ್ತದಲ್ಲಿ ನೆಲೆ ನಿಲ್ಲುವಂತೆ ಪ್ರಾರಂಭದಿಂದಲೂ ಮಾಡಲಾಗಿತ್ತು. ಒಬ್ಬ ಗುರು, ಒಬ್ಬ ಪುರೋಹಿತ, ಒಬ್ಬ ಆಚಾರ್ಯ ಇಡಿಯ ಸಮಾಜವನ್ನು ತನ್ನ ಆದೇಶದ ಅಂಕೆಯಲ್ಲಿರಿಸಿಕೊಳ್ಳಲು ಸಮರ್ಥನಾಗಿದ್ದ. ಆತನ ಮಾತು ವೇದ. ಆತನ ಅನ್ನಿಸಿಕೆ ಅದ್ವಿತೀಯ. ಅದಕ್ಕೆ ಎರಡಿಲ್ಲ. ಒಬ್ಬ ವ್ಯಕ್ತಿ ಸಮಾಜಕ್ಕೆ ಹಿತವಾಗುವ ಕಾಲ, ದೇಶ, ಪರಿಸ್ಥಿತಿಗೆ ಸರಿಬೀಳುವ ನಡವಳಿಕೆಯೊಂದನ್ನು ರೂಪಿಸಿ – ಸಮಾಜದ ಮುಂದೆ ಸ್ಥಾಪಿಸಿ ಅದರಂತೆ ಎಲ್ಲರೂ ನಡೆದುಕೊಳ್ಳಬೇಕು ಎಂದು ಆದೇಶವಿತ್ತರೆ ಸಾಮಾಜಿಕರು ಅಂತಹ ಆದೇಶವನ್ನು ಪಾಲಿಸುತ್ತಿದ್ದರು. ಅಂಥವುಗಳನ್ನೇ ಶಾಸ್ತ್ರವೆಂದು ಹೇಳುವುದು. ಶಾಸನವಾಗಿ – ಕಟ್ಟಳೆಯಾಗಿ – ಜನರ ನಡವಳಿಕೆಗೆ ಮಾರ್ಗದರ್ಶಿಯಾಗಿ ಇರುವ ನಿಯಮವೇ ಶಾಸ್ತ್ರ. ಆಗಲೂ ಯಾವುದು ಯಾಕೆ ಏನು ಹೇಗೆ ಎಂದು ಕೇಳುವ ಜನ ಇಲ್ಲದಿರಲಿಲ್ಲ. ಅಂಥವರಿಗೆ ಮನವರಿಕೆಯಾಗುವಂತೆ ಹೇಳುವವರೂ ಇದ್ದರು. ಹಾಗಾಗಿ ನಡವಳಿಕೆಗಳು ನಂಬಿಕೆಗಳಾಗಿ ಬಲಿತು ಹಾಗೇ ರೂಢಿಗೆ ಬಂದುವು.

ಇನ್ನೊಂದು ಮಹತ್ವದ ಸಂಗತಿಯೆಂದರೆ ಭಕ್ತಿಮಾರ್ಗದಲ್ಲಿ, ಶಾಸ್ತ್ರಮಾರ್ಗದಲ್ಲಿ ಅಹಂಕಾರಕ್ಕೆ ಸ್ಥಾನವಿಲ್ಲ. ಸ್ವಂತಿಕೆಗೆ ಜಾಗವಿಲ್ಲ. ಸಮಷ್ಟಿಗಾಗಿ ವ್ಯಕ್ತಿ ತ್ಯಾಗಕ್ಕೆ ಸಿದ್ಧವಾಗಬೇಕಾಗುತ್ತಿತ್ತು. ಅದು ಆಗಿನ ಸಮಾಜದ ರೀತಿ. ನಾನು ಮಾಡುವ ಆಚರಣೆ – ನಡವಳಿಕೆ – ನನಗೆ ಸರಿಯೆ ? ಸರಿಯೆನ್ನಿಸದಿದ್ದರೂ ಯಾಕೆ ಮಾಡಬೇಕು ? ಎಂದು ತರ್ಕಿಸುವ ಪ್ರಯತ್ನವನ್ನೇ ನಂತರದ ದಿನಗಳಲ್ಲಿ ಮೊಟಕು ಮಾಡಲಾಯಿತು. ಹೇಳಿದಷ್ಟು ಕೇಳು – ಅದರಂತೆ ಮಾಡು – ವಾದ ಮಾಡಬೇಡ ; ಎನ್ನುವ ಮತಗ್ರಂಥಗಳೂ ಪ್ರಪಂಚದಲ್ಲಿ ಪ್ರಚಲಿತವಿವೆ. ಅವು ಪ್ರಭು ಸಂಹಿತೆಗಳು. ನಮ್ಮ ಜನ ಇಂಥ ಸಂದರ್ಭದಲ್ಲಿ ಮನಸ್ಸಿಲ್ಲದಿದ್ದರೂ – ಕಾಟಾಚಾರಕ್ಕೆ, ಬುದ್ಧಿಗೆ ನಿಲುಕದಿದ್ದರೂ ದಾಕ್ಷಿಣ್ಯಕ್ಕೆ, ತರ್ಕಕ್ಕೆ ಸರಿಬರದಿದ್ದರೂ ಒತ್ತಾಯಕ್ಕೆ – ಚಿತ್ತದಲ್ಲಿ ನೆಲೆಸಿಲ್ಲದಿದ್ದರೂ ಪುರೋಹಿತರ ಹೇಳಿಕೆಯಂತೆ ತಮ್ಮ ನಡವಳಿಕೆ ತಿಳಿದೋ ತಿಳಿಯದೆಯೋ ನಡೆದುಕೊಳ್ಳುತ್ತಿದ್ದರು.

ಹಗಲಿನಂತೆ ಬೆಳಕು ಬೀರುತ್ತಿರುವ ರಸ್ತೆಯಲ್ಲಿ 'ದೀಪವಿಲ್ಲದೆ ಸೈಕಲ್ ಸವಾರಿ ಮಾಡಬಾರದು' ಎಂಬ ಕಾನೂನು ನಮಗೆ ಸರಿಬರುವುದಿಲ್ಲ. ಆದರೂ ಪೋಲೀಸರ ಹೆದರಿಕೆಯಿಂದ ಪಾಲಿಸುತ್ತೇವೆ. ಹಾಗೇ ನಮ್ಮ ಪರಂಪರೆಯ ಕೆಲವಾರು ನಡವಳಿಕೆಗಳು ನಮ್ಮ ಈಗಿನ ಕಾಲಕ್ಕೆ ಸರಿಬರುವುದಿಲ್ಲ. ಆದರೂ ಹಿರಿಯರು ಹೇಳುತ್ತಾರೆಂದೋ, ಜನ ನಗುತ್ತಾರೆಂದೋ ನಾವು ಆಚರಿಸುತ್ತೇವೆ ಒಲ್ಲದ ಮನಸ್ಸಿನಿಂದ. ರಸ್ತೆಯಲ್ಲಿ ಹಗಲಿನಂತೆ ದೀಪದ ಬೆಳಕು ಇದ್ದರೂ ವಾಹನಗಳಿಗೆ ದೀಪವಿರಬೇಕೆಂಬ ಕಾನೂನಿನ ಹಿನ್ನೆಲೆಯಲ್ಲಿರುವ ಒಳಿತನ್ನು ಅರಿಯದ ನಾವು ಒಲ್ಲದ ಮನಸ್ಸಿನಿಂದ ಪಾಲಿಸುವಂತೆ ನಮ್ಮ ನಡವಳಿಕೆಗಳ ಹಿನ್ನೆಲೆಯಲ್ಲಿರುವ ತತ್ತ್ವ ಹಾಗೂ ಸತ್ವಗಳನ್ನು ಅರಿಯದೆ ಗೊಡ್ಡು ನಡವಳಿಕೆ – ಮೂಢನಂಬಿಕೆ ಎಂದು ತಿರಸ್ಕರಿಸುತ್ತ ಪಾಲಿಸುತ್ತೇವೆ. ನಮ್ಮ ನಡವಳಿಕೆಗಳು ತೀರ ಅರ್ಥಶೂನ್ಯವಾಗಿಯೇ ಇರುತ್ತಿದ್ದರೆ ಅವು ಬಹಳ ಹಿಂದಿನ ಕಾಲದಿಂದ ಇಂದಿನ ಕಾಲದವರೆಗೂ – ಅಲ್ಪಸ್ವಲ್ಪ ರೂಪಪರಿವರ್ತನೆ ಮಾಡಿಕೊಂಡರೂ–ಬಾಳಿ ಬದುಕಿರುತ್ತಿದ್ದಿಲ್ಲ. ಮಳೆಗಾಲದ ಕೊಡೆ ಚಳಿಗಾಲದಲ್ಲಿ ಮೂಲೆ ಸೇರುವಂತೆ ನುರೆಯಾಗಿ ಬಿಡುತ್ತಿದ್ದುವು. ಆದರೆ ಹಾಗಾಗಲಿಲ್ಲ. ನಮ್ಮ ನೂರಾರು ನಡವಳಿಕೆಗಳು ಬುದ್ಧಿ, ಅಹಂಕಾರಗಳ ನಿಲುವಿಗೆ ನಿಲುಕದೆ ನೇರ ಮನಸ್ಸಿನಿಂದ ಚಿತ್ತಕ್ಕೆ ಧಾವಿಸಿ ಅಲ್ಲಿ ನೆಲೆಗೊಂಡು ಚಿತ್ತವೃತ್ತಿಯಿಂದ ಪ್ರವರ್ತಿಸುತ್ತಿರುವುದರ ಕಾರಣವನ್ನು ನಾವು ಕಂಡುಕೊಂಡರೆ ಅವುಗಳ ಮೂಲದಲ್ಲಿ ಏನೋ ಸರಿಯಾದುದು ಇರಬೇಕು. ಇಲ್ಲದಿದ್ದರೆ ನಮ್ಮ ಬುದ್ಧಿ – ಅಹಂಕಾರಗಳು ಒಗೆದುಬಿಡುತ್ತಿದ್ದುವು ಎಂದೆನ್ನಿಸುತ್ತದೆ. ಅಲ್ಲದೆ ಕೆಲವು ಕಾಲ – ಕೆಲವು ಸಂದರ್ಭಗಳಲ್ಲಿ ನಮ್ಮ ಬುದ್ಧಿ ಅಹಂಕಾರಗಳು ಚಿತ್ತದ ಮೇಲೆ ಧಾಳಿ ಮಾಡಿ ನಮ್ಮ ನಡವಳಿಕೆಗಳಿಗೆ ತಡೆ ಹಾಕಿದರೂ ನಂತರ ಮನಸ್ಸು ಗ್ಲಾನಿಯನ್ನು ಅನುಭವಿಸುವುದು – ಯಾಕೋ ನಾನು ಮಾಡಿದ್ದು ಸರಿಯಲ್ಲ– ಎಂದೆನಿಸುವುದು ಸಾಧ್ಯ. ಹಾಗಿರುವುದರಿಂದ ಬುದ್ಧಿ ಅಹಂಕಾರ ಚಿತ್ತಗಳು ಮನಸ್ಸಿನ ಅಂಗಗಳೇ ಹೊರತು ಮನಸ್ಸಿನ ಅಧಿಕಾರಿಗಳಲ್ಲ. ಮನಸ್ಸೇ ಪ್ರಧಾನವಾದುದು. ಇಂದು ಬುದ್ಧಿಗೆ ಪ್ರಾಧಾನ್ಯತೆ. ಹಾಗಾಗಿ ಈಚೆಗೆ ನಮ್ಮ ಪೂರ್ವೀಕರ ನಡವಳಿಕೆ ನಂಬಿಕೆಗಳ ಬಗೆಗೆ ನಾವು ಬಹಳ ಕುತೂಹಲದಿಂದ ಯೋಚಿಸಲು ತೊಡಗಿದ್ದೇವೆ. ನಮ್ಮ ಬುದ್ಧಿ ಈ ದಿಕ್ಕಿನಲ್ಲಿ ಕೆಲಸ ಮಾಡುತ್ತದೆ. ಅಹಂಕಾರ ನೋಡಲು ಪ್ರಯತ್ನಿಸುತ್ತದೆ. ಆದರೆ ಬುದ್ಧಿಗೆ ನಿಲುಕುವುದೇನು ... ಶೂನ್ಯ. ಕಾರಣ : ನಮ್ಮ ನಡವಳಿಕೆಗಳಿಗೆ ತರ್ಕಶುದ್ಧವಾದ ಬುದ್ಧಿಗಮ್ಯವಾದ ವಿವರಣೆ ನೀಡುವವರಿಲ್ಲ. ವಿವರಣೆಗಳು ಶಾಸ್ತ್ರದಲ್ಲಿಯೂ ಸಿಗುವುದಿಲ್ಲ. "ಹೀಗೆ ಮಾಡಬೇಕು" ಎಂದು ಶಾಸ್ತ್ರ ಹೇಳುತ್ತದೆ. 'ಹಾಗೆ ಮಾಡು' ಎಂದು ಹಿರಿಯರು ಹೇಳುತ್ತಾರೆ. ಯಾಕೆ ಹಾಗೆ ಮಾಡಬೇಕು ಎಂದು ಪ್ರಶ್ನಿಸಿದರೆ ಒಂದು ಕಾಲದಲ್ಲಿ ದೊರೆಯುತ್ತಿದ್ದ ಸಮರ್ಪಕವಾದ, ಮನಸ್ಸಿಗೆ, ಬುದ್ಧಿಗೆ,

(23 ನೇ ಪುಟ ನೋಡಿ)

# ಶ್ರೀ ಕೃಷ್ಣ ಜನ್ಮಾಷ್ಟಮಿ

ವ್ರತಗಳು ಅನೇಕ ವಿಧ. ಕೆಲವು ವ್ರತಗಳು ಹೆಂಗಸರು ಮಾತ್ರ ಮಾಡತಕ್ಕದ್ದು. ಉದಾಹರಣೆಗೆ ಋಷಿಪಂಚಮೀ ವ್ರತ, ವರಮಹಾಲಕ್ಷ್ಮೀವ್ರತಗಳು. ಕೆಲವು ವ್ರತಗಳು ಎಲ್ಲರೂ ಮಾಡತಕ್ಕದ್ದು. ಉದಾಹರಣೆಗೆ ಸರಸ್ವತೀವ್ರತ, ವರಸಿದ್ಧಿವಿನಾಯಕ ವ್ರತಗಳು, ಇದೇ ಪ್ರಕಾರ ವಾರಕ್ಕೆ ಪ್ರಾಧಾನ್ಯ ಕೊಟ್ಟ ವ್ರತಗಳು—ಸೋಮವಾರದ ವ್ರತ, ಮಂಗಳಗೌರೀವ್ರತಗಳು. ತಿಥಿಗಳನ್ನು ಸೇರಿಸಿ ವ್ರತಗಳನ್ನು ಹೇಳುವುದು ನಮ್ಮ ಸಂಪ್ರದಾಯ. ಉದಾಹರಣೆಗೆ ಗಣೇಶ ಚತುರ್ಥಿ, ಗೋಕುಲಾಷ್ಟಮಿ, ರಾಮನವಮಿ ವ್ರತಗಳು. ದೇವತಾ ಪ್ರಾಧಾನ್ಯವನ್ನು ನೋಡಿದರೆ ಶೈವರ ವ್ರತಗಳು, ವೈಷ್ಣವರ ವ್ರತಗಳೆಂದು ವಿಭಾಗ ಮಾಡಬಹುದು. ಮಹಾಶಿವರಾತ್ರಿ ಶೈವರ ವ್ರತ, ರಾಮನವಮಿ, ಅನಂತಪದ್ಮನಾಭ ವ್ರತಗಳು ವೈಷ್ಣವರ ವ್ರತಗಳು. ವೈಷ್ಣವ ಶಬ್ದವನ್ನು ಇಲ್ಲಿ ವಿಶಾಲಾರ್ಥದಲ್ಲಿ ಸ್ವೀಕರಿಸಬೇಕು.

ವಿಷ್ಣುವಿನ ದಶಾವತಾರಗಳಲ್ಲಿ ಕೃಷ್ಣಾವತಾರ ಒಂದು. ಕೆಲವರು ಕೃಷ್ಣನನ್ನು ಪೂರ್ಣಾವತಾರವಾಗಿ ಗಣನೆ ಮಾಡುತ್ತಾರೆ. ಅವರ ಮತದ ಪ್ರಕಾರ ಇತರ ಅವತಾರಗಳು ಅಂಶಾವತಾರಗಳು. ಭಾರತೀಯ ಸಾಹಿತ್ಯದಲ್ಲಿ ಕೃಷ್ಣಶಬ್ದ ಪ್ರಾಚೀನತೆ, ಕೃಷ್ಣನ ಪೂಜೆಗೆ ಸಂಬಂಧಿಸಿದ ವಿಶೇಷಗಳನ್ನು ನೋಡೋಣ.

ವೇದಗಳಲ್ಲಿ ಕೃಷ್ಣ ಎಂಬ ಶಬ್ದವಿದೆ. ಆದರೆ ಆ ಶಬ್ದ ದೇವಾಸುರರಿಗೆ, ಮಾನವರಾದ ಕ್ಷತ್ರಿಯರಿಗೆ, ಋಷಿಗಳಿಗೆ ಪರ್ಯಾಯವಾಗಿ ಕಾಣುತ್ತದೆ. ಕೃಷ್ಣನಾಮ ಹೊಂದಿದವರು ವೇದಗಳಲ್ಲಿ ಅನೇಕರು. ಆದರೆ ಅವರೆಲ್ಲ ಅವತಾರಪುರುಷರಲ್ಲ. ವೇದದಲ್ಲಿನ ವಿಷ್ಣುಸ್ತುತಿಗಳಲ್ಲಿ ಕೃಷ್ಣನ ಸೂಚನೆಯಿದೆ. ಅವುಗಳಲ್ಲಿ ಗೋರಕ್ಷಣೆ, ದೇವೇಂದ್ರನ ಸಖ್ಯ, ವಿರಾಟ್-ಸ್ವರೂಪ ಪ್ರದರ್ಶನ ಇತ್ಯಾದಿಗಳು ಮುಖ್ಯವಾದವು.

ಕೃಷ್ಣನು ಮಾನವ ಮಾತ್ರನೆಂದು ಕೆಲವರ ಅಭಿಪ್ರಾಯ. ಸಾಕ್ಷಾತ್ ಪರಮಾತ್ಮನೆಂದು ಭಕ್ತರ ವಿಶ್ವಾಸ- ಅದಕ್ಕೆ ಆಧಾರಗಳು-

ಸ್ವಯಮೇವ ಹರಿಃ ಕಿಲ
ಶ್ರೀ ಕೃಷ್ಣಸ್ತು ಭಗವಾನ್ಸ್ವಯಮ್
—ಕೃಷ್ಣಲೀಲೆ.

ಬ್ರಹ್ಮಣ್ಯೋ ದೇವಕೀ ಪುತ್ರೋ
ಬ್ರಹ್ಮಣ್ಯೋ ಮಧುಸೂದನಃ
— ನಾರಾಯಣೋಪನಿಷತ್

ಶ್ರಾವಣಮಾಸ ಕೃಷ್ಣಪಕ್ಷದ ಅಷ್ಟಮೀ ತಿಥಿ ಚಂದ್ರೋದಯ ಕಾಲದಲ್ಲಿ ಶ್ರೀಮನ್ನಾರಾಯಣಮೂರ್ತಿ ಕೃಷ್ಣನಾಗಿ ಹುಟ್ಟಿದ. ಇದೇ ಕೃಷ್ಣಾಷ್ಟಮಿ. ಇದು ಕ್ರಮವಾಗಿ ಸಾಮೂಹಿಕವ್ರತವಾಯಿತು. ಈ ವ್ರತದಿನದಲ್ಲಿ ಹಗಲೆಲ್ಲ ಉಪವಾಸ ಮಾಡಿ ಸಾಯಂಕಾಲದಲ್ಲಿ ಕೃಷ್ಣವಿಗ್ರಹವನ್ನು ಮೆರವಣಿಗೆ ಮಾಡುತ್ತಾರೆ. ಮನೆಯಲ್ಲಿ ತೊಟ್ಟಿಲು ಕಟ್ಟುತ್ತಾರೆ. ಈ ವ್ರತವನ್ನು ತಪ್ಪದೆ ಮಾಡಬೇಕೆಂದು ಸ್ಕಾಂದ ಪುರಾಣ ಹೇಳುತ್ತದೆ.



"ಶ್ರಾವಣೇ ಬಹುಳೇ ಪಕ್ಷೇ
ಕೃಷ್ಣಜನ್ಮಾಷ್ಟಮೀ ವ್ರತಮ್
ನ ಕರೋತಿ ನರೋ ಯಸ್ತು
ಭವತಿ ಕ್ರೂರ ರಾಕ್ಷಸಃ"

ಈ ವ್ರತ ಮಾಡದಿದ್ದರೆ ರಾಕ್ಷಸರಾಗುವರೆಂದು ಅಭಿಪ್ರಾಯ.

ಪ್ರಾಚೀನ ಕಾಲದಲ್ಲಿ ಸಂವತ್ಸರ ಪರಿಗಣನೆ ಬೇರೇ ರೀತಿಯಲ್ಲಿ ಇತ್ತು. ಆ ಕಾಲದಲ್ಲಿ ಮೂರೇ ಋತುಗಳು, ಪ್ರತಿ ಋತುವಿಗೂ ನಾಲ್ಕು ತಿಂಗಳು. ಆಷಾಢ ಪೂರ್ಣಿಮೆಯಿಂದ ವರುಣ ಪ್ರಘಾಸ ಆರಂಭವಾಗುತ್ತದೆ. ಶ್ರಾವಣ ಮಾಸವೇ ಆ ಕಾಲದಲ್ಲಿ ಮೊದಲನೆಯ ಮಾಸ. ಆ ತಿಂಗಳಿನಲ್ಲಿ ಬರುವ ಗೋಕುಲಾಷ್ಟಮಿ ಮೊದಲನೆಯ ಹಬ್ಬವಾಗುತ್ತದೆ. ವರ್ಷಾಕಾಲದಲ್ಲಿ ಆರಂಭವಾಗುವ ಸ್ಥಿತಿ. ಆದ್ದರಿಂದ ಸಂವತ್ಸರಕ್ಕೆ ವರ್ಷ ಎಂದು ಹೆಸರು. ಈ ಗೋಕುಲಾಷ್ಟಮಿ ವ್ರತದಲ್ಲಿ ಅರ್ಘ್ಯಕ್ಕೆ ಪ್ರಾಧಾನ್ಯ ಉಂಟು. ಚಂದ್ರನಿಗೆ ಕೃಷ್ಣನಿಗೆ ಅರ್ಘ್ಯ ಕೊಡುವುದು ಇಲ್ಲಿ ಮುಖ್ಯ. ಈ ಸತ್ಕರ್ಮದಿಂದ ಕಾಮಿತಾರ್ಥಗಳು ಲಭ್ಯವಾಗುತ್ತವೆಂದು ಭವಿಷ್ಯೋತ್ತರ ಪುರಾಣ ಹೇಳುತ್ತದೆ. ಆ ಮಂತ್ರಗಳ ಕ್ರಮ—

ಜಾತಃ ಕಂಸವಧಾರ್ಥಾಯ
ಭೂಭಾರೋತ್ತಾರಣಾಯ ಚ
ದಾನವಾನಾಂ ವಿನಾಶಾಯ
ವಸುದೇವ ಕುಲೋದ್ಭವಃ

ಪಾಂಡವಾನಾಂ ಹಿತಾರ್ಥಾಯ
ಧರ್ಮಸಂಸ್ಥಾಪನಾಯ ಚ
ಕೌರವಾನಾಂ ವಿನಾಶಾಯ
ವಸುದೇವ ಕುಲೋದ್ಭವಃ

ಶ್ರಾವಣ್ಯಾಂ ಕೃಷ್ಣಪಕ್ಷೇತು
ಅಷ್ಟಮೀ ರೋಹಿಣೀ ಯಥಾ

(22 ನೇ ಪುಟ ನೋಡಿ)

**ಡಾ॥ ಕೆ. ಸರ್ವೋತ್ತಮನ್.**

# ಹರಿದಾಸ



ಮಾತನಾಡುತ್ತಿರುವವರು ಪ್ರೊ॥ ಕೆ. ಟಿ. ಪಾಂಡುರಂಗಿ, ಕುಳಿತಿರುವವರು ಶ್ರೀ ರಾವ್ಪಲ ಸೂರ್ಯನಾರಾಯಣಮೂರ್ತಿ, ಡಾ॥ ಜಿ. ವರದರಾಜರಾವ್, ದೀನಬಂಧು ಶ್ರೀ ವಿ. ಆರ್. ನಾಯುಡು.

ತಿರುಮಲೆ ತಿರುಪತಿ ದೇವಸ್ಥಾನಗಳ ದಾಸ ಸಾಹಿತ್ಯ ಪ್ರಾಜೆಕ್ಟ್, ಹರಿದಾಸಸಾಹಿತ್ಯ ಪ್ರಸಾರದಲ್ಲಿ ಯಶಸ್ವಿಯಾಗಿ ಕೆಲಸ ಮಾಡುತ್ತ ಕಳೆದ ವರ್ಷ ತಿರುಪತಿಯಲ್ಲಿ ಹರಿದಾಸ ಆರಾಧನೆಯನ್ನೂ ಮುಳಬಾಗಿಲಿನ ನೃಸಿಂಹತೀರ್ಥದಲ್ಲಿ ಶ್ರೀಪಾದರಾಜ ಆರಾಧನೆಯನ್ನೂ, ಅಧಿಕ ಜನ ಮನ್ನಣೆ ಪಡೆಯುವಂತೆ ನಿರ್ವಹಿಸಿ 'ಭಕ್ತ ಶ್ರೀ ಪುರಂದರ ದಾಸರು' ಹಾಗೂ 'ಶ್ರೀ ವ್ಯಾಸರಾಯರು' ಪುಸ್ತಕಗಳನ್ನು ಬಿಡುಗಡೆಮಾಡಿದ್ದು ಸಪ್ತಗಿರಿಯ ಓದುಗರಿಗೆ ತಿಳಿದೇ ಇದೆ.

ಈ ವರ್ಷದ ಹರಿದಾಸ ಆರಾಧನಾ ಮಹೋತ್ಸವವನ್ನು ಬೆಂಗಳೂರಿನ ವೈಯ್ಯಾಳಿಕಾವಲಿನ ಟಿ. ಟಿ. ಡಿ. ಕಲ್ಯಾಣಮಂಟಪದಲ್ಲಿಯೂ, ಶ್ರೀಪಾದರಾಜರ ಆರಾಧನೆಯನ್ನು ಮುಳಬಾಗಿಲಿನ ನೃಸಿಂಹ ತೀರ್ಥದಲ್ಲಿಯೂ, ಕಳೆದ ಜೂನ್ ತಿಂಗಳಿನಲ್ಲಿ ಆಚರಿಸಿ, ಅಪಾರ ಭಕ್ತಜನರನ್ನು ಹರಿದಾಸ ಸಾಹಿತ್ಯದತ್ತ ಆಕರ್ಷಿತರಾಗುವಂತೆ ಮಾಡಲಾಯಿತು.

ಬೆಂಗಳೂರಿನಲ್ಲಿ ನಡೆದ ಹರಿದಾಸ ಸಾಹಿತ್ಯ ಆರಾಧನಾ ಮಹೋತ್ಸವ ಎರಡು ದಿನಗಳದ್ದು. ಜೂನ್ 8,9 ರಂದು ಕರ್ನಾಟಕದ ರಾಜಧಾನಿಯಲ್ಲಿನ ಈ ಕಾರ್ಯಕ್ರಮಕ್ಕೆ ಸ್ಥಳೀಯರದೇ ಆದ ಒಂದು ಸಲಹಾಸಮಿತಿ. ಅದರ ಕಾರ್ಯದರ್ಶಿ ಶ್ರೀ ಕೆ. ಮೋಹನರಾಯರು. ಎಲ್ಲಕ್ಕೂ ಮೇಲು ವಿಚಾರಣೆ ದೀನಬಂಧು ಶ್ರೀ ವಿ. ಆರ್. ನಾಯುಡು ಅವರದು.

ಜೂನ್ ಎಂಟರಂದು ಬೆಳಗ್ಗೆ ಸುಪ್ರಭಾತ ಪೂಜೆಯಿಂದ ಆರಂಭವಾದ ಆರಾಧನೆಯಲ್ಲಿನ ಹರಿದಾಸರಿಗೆ ಸಂಬಂಧಿಸಿದ ವಿಶೇಷ ವಸ್ತು ಪ್ರದರ್ಶನವನ್ನು ಡಾ॥ ಜಿ. ವರದರಾಜರಾಯರು ಉದ್ಘಾಟಿಸಿದರು. ನಂತರದ ಉಪನ್ಯಾಸ ಗೋಷ್ಠಿಯಲ್ಲಿ ಅವರು ದಾಸಸಾಹಿತ್ಯದ ವೈಶಿಷ್ಟ್ಯವನ್ನು ಕುರಿತು ಮಾತನಾಡಿದರು. ಅಧ್ಯಕ್ಷತೆ ವಹಿಸಿದ ಪ್ರೊ॥ ಕೆ. ಟಿ. ಪಾಂಡುರಂಗಿ ಅವರು ದಾಸ ಸಾಹಿತ್ಯದ ಸರ್ವಂಕಷ ಅಧ್ಯಯನದ ಅಗತ್ಯವನ್ನು ಕುರಿತು ಅವಧಾರಿಸಿದರು.

ಅಂದು ಸಂಜೆ ಪೇಜಾವರದ ಶ್ರೀ ಶ್ರೀ ವಿಶ್ವೇಶ ತೀರ್ಥರ ಅನುಗ್ರಹ ಭಾಷಣದ ಏರ್ಪಾಡಾಗಿತ್ತು. ಉಧೋ ಉಧೋ ಎಂದು ಸುರಿದ ಮಳೆಯಲ್ಲೂ ಜನ ಕಲ್ಯಾಣ ಮಂಟಪಕ್ಕೆ ಬರತೊಡಗಿದ್ದರು. ಕೆ. ಮೋಹನರಾಯದಿಂದ ಸ್ವಾಗತಿಸಲ್ಪಟ್ಟ ಸಭೆಗೆ ತಿರುಮಲೆ–ತಿರುಪತಿ ದೇವಸ್ಥಾನಗಳ ಪರವಾಗಿ ದಾಸಸಾಹಿತ್ಯ ಪ್ರಾಜೆಕ್ಟಿನ ಉದ್ದೇಶ, ಗುರಿಗಳನ್ನು ವಿವರಿಸುತ್ತ ಕಾರ್ಯನಿರ್ವಹಣಾಧಿಕಾರಿ ಪಿ. ವಿ. ಆರ್. ಕೆ. ಪ್ರಸಾದರು ಹಿಂದೂ ಧರ್ಮದ ಏಕತೆಗೆ, ಪರಿರಕ್ಷಣೆಗೆ ಅಗತ್ಯವಿರುವ ಎಲ್ಲ ಕೆಲಸಗಳನ್ನೂ ಕೈಗೊಳ್ಳಲು ದೇವಸ್ಥಾನಗಳು ಸಿದ್ಧವಿರುವುದಾಗಿಯೂ, ಆ ದಿಕ್ಕಿನಲ್ಲಿನ ಎಲ್ಲ ಸಲಹೆಗಳನ್ನೂ ಹೃತ್ಪೂರ್ವಕ ಸ್ವಾಗತಿಸುವುದಾಗಿಯೂ ತಿಳಿಸಿದರು.

ಅನುಗ್ರಹ ಭಾಷಣ ಮಾಡುತ್ತ ಶ್ರೀಪಾದಂಗಳವರು ತಿ. ತಿ. ದೇವಸ್ಥಾನಗಳ ಧಾರ್ಮಿಕ ಪ್ರಸಾರ ಶ್ರದ್ಧೆಯನ್ನು ಶ್ಲಾಘಿಸುತ್ತ ಜನತೆಯ ಹಣ ಹುಂಡಿಯ ಮೂಲಕ ಸಂಗ್ರಹವಾಗಿ ಧಾರ್ಮಿಕ ಸಾಹಿತ್ಯ ಸುಧೆಯಾಗಿ ಮತ್ತೆ ಜನರನ್ನೇ ಸೇರುವಂತಾಗಿದೆ ಎಂದೂ, ಜನ ಹೆಚ್ಚು ಹೆಚ್ಚಾಗಿ ಧರ್ಮ ಪರರಾಗುತ್ತ, ಸಂತ, ಋಷಿ, ಕವಿಗಳನ್ನು ಗೌರವಿಸಿದಾಗಲೇ ದೇಶದ ಪ್ರಗತಿ ಸಾಧ್ಯವೆಂದೂ ನುಡಿದರು.

ಸನ್ಮಾನಿತ ಶ್ರೀ ಪಂಡರೀನಾಥಾಚಾರ್ಯ ಗಲಗಲಿ ಅವರ ಭಾಷಣ. ಕುಳಿತಿರುವವರು ದೀನಬಂಧು ಶ್ರೀ ವಿ. ಆರ್. ನಾಯುಡು, ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಹಾಗೂ ಪೂಜ್ಯ ಪೇಜಾವರ ಸ್ವಾಮಿಗಳು.



# ರಾಧನೆ

ಆ ಸಂಜೆಯ ಇನ್ನೊಂದು ಮುಖ್ಯ ಅಂಶವೆಂದರೆ ಶ್ರೀ ಪಂಡರೀನಾಥಾಚಾರ್ಯ ಗಲಗಲಿ ಅವರ ಉಪನ್ಯಾಸ ಹಾಗೂ ಅವರಿಗೆ ನಡೆದ ಸನ್ಮಾನ. ದಾಸಸಾಹಿತ್ಯ ಪ್ರಾಜೆಕ್ಟಿನ ಪರವಾಗಿ ಈ ಜ್ಞಾನವೃದ್ಧರಿಗೆ ಶ್ರೀಪಾದಂಗಳವರು ಜೋಡಿ ಶಾಲುವಿನಿಂದ ಸನ್ಮಾನ ನಡೆಸಿದರು.

ಸಭೆಯಲ್ಲಿ ಪುರಂದರದಾಸ, ಕನಕದಾಸ, ವಿಜಯದಾಸ, ಜಗನ್ನಾಥದಾಸರುಗಳ ತೈಲ ವರ್ಣ ಚಿತ್ರಗಳನ್ನು ಅನಾವರಣಗೊಳಿಸಿದ ಶ್ರೀಪಾದಂಗಳು ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಕೆ. ಅಪ್ಪಣ್ಣಾಚಾರ್ಯರಿಂದ ಸಂಪಾದಿಸಲ್ಪಟ್ಟ ಪುರಂದರದಾಸ ಕೃತ 'ಶ್ರೀನಿವಾಸನ ಹಾಡುಗಳು' ಪುಸ್ತಕವನ್ನು ಬಿಡುಗಡೆ ಮಾಡಿದರು.

ದಿನಾಂಕ 9 ಜೂನ್ ಪ್ರಾತಃಕಾಲದ ಉಪನ್ಯಾಸ ಸಭೆಯಲ್ಲಿ ವ್ಯಾಸನಕೆರೆ ಪ್ರಭಂಜನ ಅವರು ಶ್ರೀನಿವಾಸರಾವ್ ಕೊರಟಿ ಅವರ ಅಧ್ಯಕ್ಷತೆಯಲ್ಲಿ ದಾಸಸಾಹಿತ್ಯದ ಸರಳತೆ, ತೀವ್ರತೆಗಳನ್ನು ಕುರಿತು ಉಪನ್ಯಾಸ ನೀಡಿದರು. ಅಧ್ಯಕ್ಷ ಭಾಷಣ ಮಾಡುತ್ತ ಕೊರಟಿಯವರು ದಾಸಸಾಹಿತ್ಯದ ಸುಗಂಧವನ್ನು ಹತ್ತೂ ದಿಕ್ಕಿಗೆ ಹರಡಿಸುತ್ತಿರುವ ಪ್ರಾಜೆಕ್ಟಿನ ಪ್ರಯತ್ನಗಳನ್ನು ಕೊಂಡಾಡಿದರು.

ಎರಡೂ ದಿನಗಳಲ್ಲಿಯೂ ವಿವಿಧ ಭಜನ ಮಂಡಳಿಯವರ ಸಮೂಹ ಭಜನೆಗಳು ಏರ್ಪಾಡಾಗಿದ್ದವು. ಭಾಗವಹಿಸಿದ ಹಲವು ಮಂಡಳಿಗಳ ಹೆಸರುಗಳೆಂದರೆ ಬೆಂಗಳೂರಿನ ಶ್ರೀ ಪ್ರಸನ್ನ ವೆಂಕಟೇಶ್ವರ ಭಜನಮಂಡಳಿ, ಧಾರವಾಡದ ಶ್ರೀ ವೆಂಕಟೇಶ್ವರ ಭಜನ ಮಂಡಳಿ, ಬೆಂಗಳೂರಿನ ಶ್ರೀ ಅಂಬಾಭವಾನಿ ಭಜನ ಮಂಡಳಿ. 8 ರಂದು ಬೆಂಗಳೂರಿನ ಪ್ರಭಾತ ಕಲಾವಿದರು ದೃಶ್ಯೀಕರಿಸಿದ ದಾಸರ ಹಾಡುಗಳ ಸಂಗೀತರೂಪಕ ಹೆಚ್ಚು ಜನರನ್ನು ಸೆಳೆಯಿತೆನ್ನಬಹುದು.

ಹರಿದಾಸ ಸಾಹಿತ್ಯ ಆರಾಧನೆಗೆ ಬಂದವರೆಲ್ಲರ ಗಮನವನ್ನೂ ಏಕತ್ರ ಸೆಳೆದ ಅಂಶವೆಂದರೆ ಹರಿದಾಸ ವಸ್ತು ವಿಷಯ ಪ್ರದರ್ಶನ. ಹರಿದಾಸರುಗಳು ಬಳಸುತ್ತಿದ್ದ ತಂಬೂರಿ, ಏಕತಾರಿ, ಗೆಜ್ಜೆ, ಗೋಪಾಳ ಬುಟ್ಟಿ, ಮೊದಲಾದ ಹಲವು ಹನ್ನೊಂದು ವಸ್ತುಗಳು ಅವರುಗಳು ಇದ್ದ, ಓಡಾಡಿದ ಸ್ಥಳಗಳು, ಅವರುಗಳು ಆರಾಧಿಸಿದ ದೇವತೆಗಳು, ಗುಡಿಗಳು ಎಲ್ಲವೂ ಅಂದವಾದ



9 ರಂದು ಬೆಳಗ್ಗೆ ಮಾತನಾಡಿದ ಶ್ರೀ ವಿ. ಪ್ರಭಂಜನ ಹಾಗೂ ಶ್ರೀ ಶ್ರೀನಿವಾಸರಾವ್ ಕೊರಟಿ.

ಛಾಯಾಚಿತ್ರಗಳಾಗಿಯೂ, ಹರಿದಾಸ ಸಾಹಿತ್ಯದಲ್ಲಿನ ಸೃಷ್ಟಿ ಪ್ರಕರಣದ ವರ್ಣಚಿತ್ರಗಳೂ (ಶ್ರೀ ಬಾದರಾಯಣ ಮೂರ್ತಿ) ಜಗನ್ನಾಥ ದಾಸರ ಹರಿಕಥಾಮೃತಸಾರದ ತತ್ತ್ವಪ್ರಮೇಯ ಚಿತ್ರಗಳೂ, ವಿವಿಧ ದಾಸರುಗಳ ರಂಗೋಲಿಯ ವರ್ಣರಂಜಿತ ಚಿತ್ರಗಳೂ, ಶ್ರೀ ವೆಂಕಟೇಶ್ವರ ಕಲಾಪೀಠದ ಪೇಂಟಿಂಗ್ ಸೆಲ್‌ನವರ ಸೂಚನೆಯ ಫಲಕಗಳು, ಸುಖಾಗಮನದ ಉಪ್ಪಿನ ವರ್ಣರಂಜಿತ ಚಿತ್ರವೂ, ಮೈಸೂರಿನ ಮಹಿಳೆಯರಿಂದಾದ ಶ್ರೀ ವಿಜಯದಾಸರ ಕೀರ್ತನೆಯ ರೂಪ ಕಲ್ಪನೆಯೂ, ಶ್ರೀ ವೆಂಕಟೇಶ್ವರ ಸ್ವಾಮಿಯ ವಿವಾಹದ ಮೇಣದ ಮೆರುಗಿನ ಬೊಂಬೆಗಳೂ (ಶ್ರೀಮತಿ ಲೀಲಾ ಎಸ್. ರಾವ್) ಎಲ್ಲರಿಂದಲೂ ಮೆಚ್ಚುಗೆಯನ್ನು ಪಡೆದವು.

ಎಂಟರಂದು ರಾತ್ರಿ ಶ್ರೀ ವೆಂಕಟೇಶ್ವರ ಸಂಗೀತ ನೃತ್ಯ ಕಾಲೇಜಿನ ಪ್ರಿನ್ಸಿಪಾಲ್ ಡಿ. ಪಶುಪತಿ ಮತ್ತು ವೃಂದದವರಿಂದಲೂ ಒಂಬತ್ತರಂದು ರಾತ್ರಿ ಶ್ರೀ ವೆಂಕಟೇಶ್ವರ ಕಲಾಪೀಠದ ಎಂ. ಎಸ್. ಬಾಲಸುಬ್ರಹ್ಮಣ್ಯಶರ್ಮ ಮತ್ತು ವೃಂದದವರಿಂದಲೂ ಸಂಗೀತ ಸಭೆಗಳು ನಡೆದು ಜನಪ್ರಿಯವಾದವು. ★

ಪೂಜ್ಯ ಪೇಜಾವರ ಸ್ವಾಮಿಗಳು ಹರಿದಾಸಸಾಹಿತ್ಯ ಸಂಬಂಧ ವಸ್ತು ಪ್ರದರ್ಶನವನ್ನು ವೀಕ್ಷಿಸುತ್ತಿರುವಿಕೆ.



## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಪ್ರೆಸ್‌ಕಾಂಪೌಂಡ್
ತಿರುಪತಿ–517501

( 19 ನೇ ಪುಟದಿಂದ )

ತಸ್ಯಾಂ ಚಂದ್ರೋದಯೇ ರಾತ್ರೌ
ಬಾಲ ಕೃಷ್ಣ ಸಮುದ್ಭವಃ

"ಜ್ಯೋತಿಷಾಂಪತಿಯಾಗಿಯೂ, ರೋಹಿಣೀ ಕಾಂತನಾಗಿಯೂ, ಸುಧಾಕರನಾಗಿಯೂ ಇರುವ ಚಂದ್ರನನ್ನು ಪ್ರಾರ್ಥಿಸಿ ಆ ಬಳಿಕ ಕಂಸಾಸುರನನ್ನು ಕೊಂದು ಭೂಭಾರವನ್ನು ತಗ್ಗಿಸಿ, ದಾನವಾಂತಕನಾಗಿ ವಸುದೇವನ ಮಗನಾಗಿ ಇರತಕ್ಕ ಕೃಷ್ಣನಿಗೆ ಮೊದಲನೇ ಅರ್ಘ್ಯವನ್ನು, ಪಾಂಡವರ ಹಿತಕ್ಕಾಗಿಯೂ, ಲೋಕದಲ್ಲಿ ಧರ್ಮ ಸಂಸ್ಥಾಪನೆ ಮಾಡುವುದಕ್ಕಾಗಿಯೂ, ಕೌರವರ ನಾಶಕ್ಕಾಗಿಯೂ ಹುಟ್ಟಿರತಕ್ಕ ಕೃಷ್ಣಪರಮಾತ್ಮನಿಗೆ ದ್ವಿತೀಯಾರ್ಘ್ಯವನ್ನೂ, ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮೀ ದಿನ ರಾತ್ರಿ ಚಂದ್ರೋದಯ ಕಾಲದಲ್ಲಿ ಹುಟ್ಟಿದ ಶ್ರೀಕೃಷ್ಣನಿಗೆ ತೃತೀಯಾರ್ಘ್ಯವನ್ನೂ ರೋಹಿಣೀ ಸಹಿತನಾಗಿರತಕ್ಕ ಚಂದ್ರನಿಗೆ ಕೊಡಬೇಕೆಂದು "ವ್ರತಮಾಲ" ಹೇಳುತ್ತದೆ.

ಕೃಷ್ಣನ ಪೂಜೆ ಪ್ರಾಚೀನವಾದದ್ದು. ಪಾಣಿನೀಯ ವ್ಯಾಕರಣದಲ್ಲಿ "ವಾಸುದೇವಾರ್ಜುನಾಭ್ಯಾಮ್ ಉಣ್" ಎನ್ನುವ ಸೂತ್ರ ಕೃಷ್ಣನನ್ನು ಸೂಚಿಸುತ್ತದೆ. ಯಾರು ವಾಸುದೇವನಲ್ಲಿ ಭಕ್ತಿಯಿಟ್ಟು ಸೇವಿಸುತ್ತಾರೋ ಅವರು ವಾಸುದೇವಿಕರೆಂದು ಪಾಣಿನಿ ಹೇಳುತ್ತಾನೆ.

ಕೃಷ್ಣನ ಬಾಲಲೀಲೆಗಳು ಮನೋಹರವಾದವು. ಸಾಮಾನ್ಯವಾಗಿ ಶಿಶುಗಳಿಗೆ ಗಾಳಿ, ನೀರು, ಧನ, ಹಾವು, ಗಿಡಗಳು, ದುಷ್ಟರಿಂದ ಬರುವ ಕಷ್ಟಗಳೆಲ್ಲವೂ ಕೃಷ್ಣನ ಬಾಲ್ಯಾವಸ್ಥೆಯಲ್ಲಿ ನೋಡಬಹುದು ಆದ್ದರಿಂದ ತಮಿಳಿನಲ್ಲಿ ಪೆರಿಯಾಳ್ವಾರರು, ತೆಲುಗಿನಲ್ಲಿ ಅನ್ನಮಯ್ಯ, ಕನ್ನಡದಲ್ಲಿ ದಾಸರೆಲ್ಲರು ಕೃಷ್ಣನ ಲೀಲೆಗಳನ್ನು ಮೈಮರೆತು ಹಾಡಿದ್ದಾರೆ. ಅನ್ನಮಯ್ಯನ ಒಂದು ಭಾವಚಿತ್ರವನ್ನು ನೋಡಿ–

ತಾಯಿ ಯಶೋದಾದೇವಿ ಬಾಲಕೃಷ್ಣನಿಗೆ ಅನ್ನವಿಡುತ್ತಿದ್ದಾಳೆ. ಕೃಷ್ಣನಿಗೆ ಚಂದ್ರನನ್ನು ತೋರಿಸಿ 'ಚಂದಮಾಮ ರಾವೆ' ಎನ್ನುವ ಹಾಡು ಹಾಡುತ್ತಾಳೆ. ಕೃಷ್ಣನು ಚಂದ್ರನನ್ನು ನೋಡಿ ಸಂಜ್ಞೆ ಮಾಡಿದನಂತೆ. ಚಂದ್ರ ಆಕಾಶದಿಂದ ಭೂಮಿಗೆ ಬಂದನಂತೆ. ತಾಯಿ ದಿಗ್ಭ್ರಾಂತಳಾದಳು. ಇಲ್ಲಿ ಚಿತ್ರವೇನೆಂದರೆ ಲೋಕದಲ್ಲಿ ಯಾರನ್ನು ಕರೆದರೇ ಅವರೇ ಬರುತ್ತಾರೆ. ಯಶೋದೆ ಚಂದ್ರನನ್ನು ಉದ್ದೇಶ ಮಾಡಿ ಹಾಡಿದ ಕಾರಣದಿಂದ ಚಂದ್ರನು ಬರುವುದರಲ್ಲಿ ಆಶ್ಚರ್ಯವಿಲ್ಲ. ಇಲ್ಲಿ ಪರಮಾತ್ಮನ ಆದೇಶ ಗೌಣರೂಪದಲ್ಲಿ ವ್ಯಕ್ತವಾಯಿತು. ಇದೇ ರೀತಿಯಲ್ಲಿ ಕೃಷ್ಣನ ಮಹಿಮೆಯನ್ನು ಪುರಂದರದಾಸರು ಹೀಗೆ ಹಾಡಿದ್ದಾರೆ.

"ಏನು ಹೇಳಲಿ ನಾನು - ಕೃಷ್ಣನ
ಮಹಿಮೆ
ಯಾರಿಗೂ ತಿಳಿಯದಮ್ಮ
ಹೊತ್ತಾರೆದ್ದು ಯಶೋದೆ ಮುತ್ತು
ಪೋಣಿಸುತ್ತಿದ್ದಳು
ಹತ್ತಿರಿದ್ದ ಕೃಷ್ಣ ಬಂದು ಮುತ್ತು
ತೆಗೆದುಕೊಂಡು
ಸುತ್ತಲಿದ್ದ ಹುಡುಗರ ಸಹಿತ
ಹಿತ್ತಲೊಳಗೆ ಬಿತ್ತಹೋದ
ಪರಿಪರಿ ಚಿಂತೆಯಿಂದ ಯಶೋದೆ
ನಾರಿಯರ ಕಳುಹಿದಳು
ಸಂದು ಸಂದಿಯಲ್ಲಿ ಹುಡುಕಿ ಹುಡುಕಿ
ಕಂದ ಕಾಣನೆಂದು ಬರಲು
ಒಂದು ಕ್ಷಣದಲಿ ಕೃಷ್ಣ ಬಂದು
ಎದುರಾಗಿ ನಿಂದ
ಕಂದಯ್ಯನ ಕರ ಹಿಡಿದು ಯಶೋದೆ
ಕರೆತಂದಳು ಮನೆಗೆ
ಕಂದ ಬಹಳ ಹಸಿದನೆಂದು ತುತ್ತು
ಮಾಡಿ ಉಣಿಸಿದಳು
ಮುತ್ತು ಏನು ಮಾಡಿದೆಯೆಂದು
ಸಿಟ್ಟಿನಿಂದ ಕೇಳಿದಳು
ಹೆತ್ತ ತಾಯ ಕರೆದು ಕೊಂಡು
ಹಿತ್ತಲೊಳಗೆ
ಮುತ್ತಿನ ಗಿಡ ತೋರಿಸಿದ
ಪಂಟೆ ಪಂಟೆಗೆ ಎಂಟು ಎಂಟು
ಗೊಂಚಲು ಗೊಂಚಲು ಜೋಲುತಿರಲು
ಕಡಿದು ಕಡಿದು ರಾಶಿ ಹಾಕಿದ ಪರಮ
ಪುರಂದರ ವಿಠಲರಾಯ"

ಕೃಷ್ಣನ ಜನ್ಮ ಗೋಕುಲಕ್ಕೆ ಮಾತ್ರವಲ್ಲ, ಒಂದು ಕಾಲಕ್ಕೆ ಮಾತ್ರವಲ್ಲ, ಎಲ್ಲರಿಗೂ ಸಂತೋಷವನ್ನು ಪ್ರದಾನ ಮಾಡುವುದು ಎಂತಲೇ ದಾಸರು ಹೇಳಿದ್ದು;

"ಕೃಷ್ಣ ಎನ ಬಾರದೆ ಕೃಷ್ಣನ ನೆನೆದರೆ
ಕೃಷ್ಣ ಹಿಂದಿಸ್ಟಿಲ್ಲ
ನರ ಜನ್ಮ ಬಂದಾಗ ನಾಲಿಗೆ ಇರುವಾಗ
ಕೃಷ್ಣ ಎನ ಬಾರದೆ" ★

( 18 ನೇ ಪುಟದಿಂದ )

ಅಹಂಕಾರಕ್ಕೆ ಸರಿಹೊಂಗುವ ಉತ್ತರ ಕೊಡುವ ಚೈತನ್ಯ – ಹೇಳುವವರಲ್ಲಿಲ್ಲ.

ಮನೋವಿಜ್ಞಾನ, ಶರೀರ ವಿಜ್ಞಾನ, ಸಮಾಜ ವಿಜ್ಞಾನ ಹಾಗೂ ದರ್ಶನಗಳನ್ನು ಹೊಂದಿಕೊಂಡು ರಚಿತವಾದ ಸಾಮಾಜಿಕ ನಡವಳಿಕೆಗಳ ಸೂತ್ರಗಳೇ ಶಾಸ್ತ್ರಗಳು. ಹಾಗಾಗಿ ನಮ್ಮ ನಡವಳಿಕೆಗಳಲ್ಲಿ ಈ ಅಂಶಗಳು ನಿಹಿತವಾಗಿವೆಯೆಂಬ ಸಂಗತಿ ನಾವು ಮರೆಯುವಂತಿಲ್ಲ. ಆದುದರಿಂದ ಪ್ರತಿಯೊಂದು ನಡವಳಿಕೆಯನ್ನು ಯಾವುದಾದರೂ ಒಂದು ನಿಲುವಿನಿಂದ ನೋಡಬೇಕು. ಒಂದು ನಡವಳಿಕೆ ಸಮಾಜ ವಿಜ್ಞಾನದಂತೆ ಸರಿಬರಬಹುದು. ಇನ್ನೊಂದು ಮನೋವಿಜ್ಞಾನದಂತೆ ಸರಿಬರಬಹುದು ಮತ್ತೊಂದು ಶರೀರ ವಿಜ್ಞಾನದಂತೆ ಸರಿಯಿರಬಹುದು. ಇನ್ನೊಂದು ದರ್ಶನದಂತೆ ಸರಿಯಾಗಿರಬಹುದು. ಇವುಗಳ ಜೊತೆಗೆ ಕೆಲವು ಕಾಲ ದೇಶ ಪರಿಸ್ಥಿತಿಗೆ ಅನುಗುಣವಾಗಿ ರೂಢಿಗೆ ಬಂದವುಗಳೂ ಇರಬಹುದು.

ನಾವು ಕನ್ನಡಿಗರು. 'ಪದನರಿತು ನುಡಿಯಲುಂ ನುಡಿದುದನಾರಯಲುಂ ಬಲ್ಲ ನಾಡವರು'ಗಳು. ಹಾಗಾಗಿ ಪ್ರಚಲಿತವಿರುವ ಕೆಲವು ನಡವಳಿಕೆ ನಂಬಿಕೆಗಳ ಬಗೆಗೆ ಕೆಲವು ಸಂಗತಿಗಳನ್ನು ಪ್ರಸ್ತುತಪಡಿಸುತ್ತೇನೆ.

ಅರಿಯದೆ ಆಚರಿಸುವ ಅಥವಾ ಆಚರಿಸದಿರುವ ಕ್ರಮಕ್ಕಿಂತ ಅರಿತು ಆಚರಿಸುವ ಅಥವಾ ಆಚರಿಸದೇ ಇರುವ ರೀತಿ ಮೇಲು. 'ಅದರಲ್ಲೇನಿದೆ ಅದೆಲ್ಲಾ ಗೊಡ್ಡು ನಡವಳಿಕೆ. ಮೂಢ ನಂಬಿಕೆ' ಎಂಬ ತೀರ್ಪು ಕೊಡುವ ಮೊದಲು ಆ ಮಾತು ಸರಿಯೆ? ನೀವು ಹೇಳುವುದು ನಿಮಗೆ ಉಚಿತವಾಗಿದೆಯೇ ಎಂದು ನೋಡಿಕೊಂಡರೆ ಉತ್ತಮವಲ್ಲವೆ?

ಬನ್ನಿ ವಿಚಾರಿಸೋಣ.

ನಿಮಗೊಂದು ಮನೆಯಿದೆ– ನೆಲೆಯಿದೆ. ಅಲ್ಲಿ ನಮ್ಮ ನೆಂಟರು ಇಷ್ಟರು ಬರುತ್ತಾರೆ. 'ಬನ್ನಿ ಬನ್ನಿ'– ಎಂದು ಅವರನ್ನು ಸ್ವಾಗತಿಸಿ ಒಳಗೆ ಕರೆದು ಒಳಗಿರುವ ಕಿರಿಯರನ್ನು ಕರೆದು 'ಮಗಾ ಕೈಗೆ ನೀರು ಕೊಡು' ಎನ್ನುವುದು, 'ಆ ಮಣೆ ಹಾಕು, ಚಾಪೆ ಹಾಕು' ಎನ್ನುವುದು ಆತಿಥ್ಯದ ಆದ್ಯ ಕ್ರಿಯೆ. ಬೆಳಗಿದ ತಂಬಿಗೆಯಲ್ಲಿ ನೀರು ತಂದು ಮೊದಲು ಅತಿಥಿಯ ಕೈಗೆ ನೀರು ಹಾಕಿ ಆತ ಕೈ ತೊಳೆದುಕೊಂಡ ನಂತರ ತಂಬಿಗೆಯನ್ನು ಕೈಗಿತ್ತು ಮುಖ ತೊಳೆದುಕೊಳ್ಳಲು ಹೇಳುತ್ತೇವೆ. ಆತ ಮೊದಲು ಮುಖ ತೊಳೆದು ನಂತರ ಹಿಮ್ಮಡಿ ಒದ್ದೆಯಾಗುವಂತೆ ಕಾಲುಗಳನ್ನು ತೊಳೆದುಕೊಳ್ಳುತ್ತಾನೆ. ಮನೆಗೆ ಬಂದಾತ ಅಳಿಯನಾದರೆ ನೀರು ಕೊಡಲು ಅತ್ತೆಯೇ ಬರಬಹುದು. ಹೆಂಡತಿ ಇದ್ದರೆ ಅವಳೂ ಬರಬಹುದು ನೆಂಟರಾದರೂ ಮನೆಯ ಯಜಮಾನಿತಿಯೇ ಬರುತ್ತಾಳೆ. ಅಪರಿಚಿತ ಅತಿಥಿಯಾದರೆ ಚಿಕ್ಕ ಮಕ್ಕಳು, ಹುಡುಗಿಯರು ನೀರು ತರುತ್ತಾರೆ. ನಂತರ ಒಳಗೆ ಕರೆದು ಚಾಪೆ, ಮಣೆಯಲ್ಲಿ ಕೂರಿಸುತ್ತಾರೆ.

ಈ ನಡವಳಿಕೆಯಲ್ಲಿ ವೈಜ್ಞಾನಿಕತೆ, ಸಾಮಾಜಿಕತೆ ಇದೆಯೆ? ಎಂದು ನೀವು ಎಂದಾದರೂ ತರ್ಕ ಮಾಡಿ ನೋಡಿದ್ದೀರಾ? ಹೌದೆಂದಾದರೆ ಮೊದಲು ಕೈಗೆ ನೀರು ನೀಡುವುದರಲ್ಲಿ ಸ್ವಚ್ಛತೆ, ಉಷ್ಣ ಪ್ರಸರಣ, ಗೌರವದ ಸಿದ್ಧಾಂತಗಳು ಅಡಗಿವೆ. ಮುಖ ತೊಳೆದು ಹಿಮ್ಮಡಿ ಒದ್ದೆಯಾಗುವಂತೆ ಕಾಲು ತೊಳೆಯುವುದರಲ್ಲಿಯೂ ಸ್ವಚ್ಛತೆಯ ನಿಯಮ – ಆರೋಗ್ಯದ ನಿಯಮವಿವೆ. ಇದನ್ನು ಅರಿತು ಆಚರಿಸುವುದರಿಂದ ಒಳಿತಿದೆ. 'ಹಿಮ್ಮಡಿ ತೊಳೆಯದಿದ್ದರೆ ಶನಿರಾಯ ಒಳಕ್ಕೆ ಬರ್ತಾನೆ' ಎಂಬ ಹೆದರಿಕೆ ಹಾಕಿ, ನಳ ಚರಿತ್ರೆಯ ಕತೆ ಹೇಳಿ, ಹೆದರಿಸಿ, ಕಾಲು ತೊಳೆಯುವ ಕ್ರಮದಲ್ಲೂ ವ್ಯತ್ಯಾಸವಾಗದಂತೆ ನೋಡಿಕೊಂಡ ನಮ್ಮ ಹಿರಿಯರಿಗೆ ಶುಚಿತ್ವದ ಬಗ್ಗೆ ಎಷ್ಟು ಕಾಳಜಿ ಇತ್ತು ಎಂಬ ಸಂಗತಿಯನ್ನು ಸಾರಿ ಹೇಳುತ್ತದೆ. ಭಯದ ಬೆಂಬಲದಿಂದ ನಿಯಮದ ಪಾಲನೆಗೆ ಒತ್ತಾಯಿಸುವುದು ಈಗಲೂ ಜಾರಿಯಲ್ಲಿದೆ. ಈಗ ತೋರುವ ಭಯ ಬೇರೆ ರೀತಿಯದು. ಹಿಂದಿನವರು ತೋರುತ್ತಿದ್ದ ಭಯ ಬೇರೆ ರೀತಿಯದು. ಆದರೆ ಉದ್ದೇಶ ಒಂದೇ. ಇಡಿಯ 'ನಳ ಚರಿತ್ರೆ' ಜೂಜಿನ ದುಷ್ಪರಿಣಾಮವನ್ನು ತಿಳಿಸಲು ಹೆಣೆದ ಒಂದು ನೀತಿ ಕತೆ–ಎಂದು ನನ್ನ ಮಿತ್ರರೊಬ್ಬರ ವಾದ. ಬಹುಶಃ ಅದು ಸರಿ ಇರಲೂ ಸಾಕು.

ಶಾಸ್ತ್ರಗಳು ಮನೆಗೆ ಬಂದ ಅತಿಥಿಗೆ ಆಸನ ತೋರಿಸಿ, ಅರ್ಘ್ಯವಿತ್ತು, ಆಚಮನ ಮಾಡಿಸಿ ಪಾದ್ಯ ನೀಡಬೇಕು ಎಂದು ಹೇಳುತ್ತದೆ. ಈ ರೀತಿಗೂ ಮೇಲೆ ಹೇಳಿದ ರೀತಿಗೂ ಯಾವುದೇ ವ್ಯತ್ಯಾಸವಿಲ್ಲ. ಅಲ್ಲಿ ಶಬ್ದಗಳು ಸಂಸ್ಕೃತದಲ್ಲಿವೆ. ಇಲ್ಲಿ ನಡವಳಿಕೆಯಲ್ಲಿದೆ–ಪದಗಳು ಕನ್ನಡದಲ್ಲಿವೆ

ವೈದ್ಯರನ್ನು ಕೇಳಿ ಅವರು ಹೇಳುತ್ತಾರೆ. ಹೊರಗಿನಿಂದ ಬಂದವರು ನೇರ ಅಡಿಗೆ ಮನೆಗೆ ನುಗ್ಗಬಹುದೆ? ಕೈತೊಳೆಯದೆ ಮನೆಯ ಪಾತ್ರೆ ಮುಟ್ಟಬಹುದೆ? ಮೊದಲು ಮುಖಕ್ಕೆ ನೀರು ಹಾಕಬೇಕೇ, ಕಾಲಿಗೆ ಹಾಕಬೇಕೆ? ಕೇಳಿ. ಅವರು ಹೇಳುತ್ತಾರೆ. ಅವರ ಮಾತು ನಮ್ಮ ನಡವಳಿಕೆಗೆ ಅನುಗುಣವಾಗಿಯೇ ಇರುತ್ತದೆ.

ಹಾಗಾಗಿಯೇ ನಮ್ಮ ಕವಿಗಳು ನಮ್ಮ ಜನರನ್ನು 'ಕುರಿತೋದದೆಯುಂ ಪರಿಣತ ಮತಿಗಳ್'– ಎಂದುದು. ನಮ್ಮ ಹಿರಿಯರು ಬುದ್ಧಿ–ಅಹಂಕಾರಗಳಿಗೆ ಕೆಲಸ ಕೊಡದೆ ನೇರವಾಗಿ ಮನಸ್ಸಿನಿಂದ ಚಿತ್ತಕ್ಕೆ ಸಂಗತಿಗಳನ್ನು ರವಾನಿಸಿ ಚಿತ್ತವೃತ್ತಿಯಂತೆ ಆಚರಣೆ ಮಾಡುತ್ತಿದ್ದಿರಬಹುದು. ಆದರೆ ಅವರ ಆಚರಣೆ ಬುದ್ಧಿಗಮ್ಯ. ಅಹಂಕಾರ ರಮ್ಯ ಇದನ್ನು ನಾವು ನಿರ್ಧರಿಸಬೇಕು ಅಷ್ಟೆ.

ಬೀದಿಯಲ್ಲಿ ಅಲೆದಾಡಿ ಬೂಟುಗಾಲಿನಲ್ಲೇ ಅಡಿಗೆಯ ಮನೆವರೆಗೂ ನುಗ್ಗಿ, ಕೈತೊಳೆಯದೇ ಅನ್ನದ ತಪ್ಪಲೆಗೆ ಕೈಹಾಕುವ ಜನ ಇಲ್ಲವೆ? ಎಂದು ನೀವು ಪ್ರಶ್ನಿಸಬಹುದು. ಇದ್ದಾರೆ. ಇಲ್ಲವೆನ್ನುವಂತಿಲ್ಲ. ಅವರನ್ನು ನಾವು ಮಾನವರ ಪಾಲಿಗೆ ಸೇರಿಸುವುದು ಸಾಧುವೆ? ಎಂದು ಯೋಚಿಸಬೇಕಾಗುತ್ತದೆ– ಅಷ್ಟೆ. ಇಲ್ಲವೆಂದಾದರೆ ಅವರಿಗೆ ತಿಳುವಳಿಕೆ ಹೇಳುವುದೂ ನಮ್ಮ ಧರ್ಮ. ನಾವು ಮಾಡಬಹುದಾದುವುಗಳನ್ನು 'ವಿಧಿ' ಎಂದೂ ಮಾಡಬಾರದ್ದನ್ನು ನಿಷೇಧವೆಂದೂ ಶಾಸ್ತ್ರಗಳು ಹೆಸರಿಸುತ್ತವೆ. ಅಂಥ ವಿಧಿ, ನಿಷೇಧಗಳೆಲ್ಲವೂ ನಮ್ಮ ಒಳಿತಿಗಾಗಿಯೇ ಇವೆ ಎಂಬ ಸಂಗತಿ ನಾವು ಮರೆತರೆ ಏನೂ ಮಾಡುವಂತಿಲ್ಲ. ತಿಳಿಯದವರಿಗೆ ಹೇಳಬಹುದು, ಹೇಳಬೇಕು. ಹೇಳಿದರೂ ಕೇಳದಿದ್ದರೆ ಏನು ಮಾಡುವುದು? ಎಂದರೆ ಅದಕ್ಕೆ ಉತ್ತರ ಸಂದರ್ಭಕ್ಕೆ ಸರಿಯಾಗಿ ಕೊಡಬೇಕಾಗುತ್ತದೆ.

ಒಬ್ಬರು ಹೇಳಿದ್ದನ್ನು ನಂಬುವುದು ಹೇಗೆ? ಎಂಬ ಪ್ರಶ್ನೆ ಬರುತ್ತದೆ ಒಂದು ಸಂಗತಿಯನ್ನು ಮೂರು ವಿಧದಿಂದ ಪರೀಕ್ಷಿಸಬೇಕು. ಪ್ರತ್ಯಕ್ಷ, ಅನುಮಾನ, ಆಗಮ. ಇವು ಮೂರು ವಿಧಗಳು. ಇಂದ್ರಿಯಗಳ ಮೂಲಕ ಮನಸ್ಸು ಗ್ರಹಿಸಿದ್ದಷ್ಟೇ ಸತ್ಯ ಅದನ್ನು ಮಾತ್ರ ಬುದ್ಧಿ ಒಪ್ಪಿಕೊಳ್ಳುತ್ತದೆ– ಎಂದೆನ್ನುವಂತಿಲ್ಲ ಕಣ್ಣು ನೋಡದ ಎಷ್ಟೋ ಸಂಗತಿಗಳು ಸತ್ಯವಾಗಿವೆ. ನೋಡಲು ಸಾಧ್ಯವಾಗದ ಸಂಗತಿಗಳನ್ನು ಅನುಮಾನ ಅಂದರೆ ಊಹೆಯಿಂದ ಮನವರಿಕೆ ಮಾಡಿಕೊಳ್ಳಬೇಕು. ಅದೂ ಸಾಧ್ಯವಾಗದಿದ್ದರೆ 'ಆಗಮ' ಅಂದರೆ ಹಿರಿಯರ ಅನುಭವಜನ್ಯ ಉಪದೇಶಗಳು ರುಜುವಾತಿಗೆ ನೆರವಾಗಬೇಕು ಹತ್ತಾರು ಸಲ ನಾವು ಇಂದ್ರಿಯಗಳಿಂದ ಗ್ರಹಿಸದ, ಅನುಮಾನದಿಂದ ಬಗೆಹರಿಯದ, ಸಂಗತಿಗಳು ಕೇವಲ ಆಪ್ತವಾಕ್ಯದಿಂದ ಪ್ರಮಾಣವಾಗುತ್ತದೆ. ಬಹಳ ದೂರ ಯೋಚಿಸುವುದು ಬೇಡ.

ಬಾಲ್ಯದಲ್ಲಿ ನಮ್ಮ ತಾಯಿ ಒಬ್ಬ ವ್ಯಕ್ತಿಯನ್ನು ತೋರಿಸಿ 'ಅಪ್ಪ' ಎಂದು ಪರಿಚಯಿಸುತ್ತಾಳೆ. ನಾವು ನಂಬುತ್ತೇವೆ. ಹಾಗೇ ಕರೆಯು

ತ್ತೇವೆ. ಈ ನಂಬಿಕೆಗೆ ವೈಜ್ಞಾನಿಕ, ಪ್ರತ್ಯಕ್ಷ, ಅನುಮಾನದ ಪುರಾವೆಗಳಿಲ್ಲ. ಸ್ತನ್ಯಪಾನದಿಂದ ನಮ್ಮನ್ನು ಸಾಕಿ, ಸಲಹಿದ ತಾಯಿ ಹೇಳುವ ಮಾತು ಪ್ರಮಾಣವಾಗುತ್ತದೆ. ತಾಯಿಯೇ ಸುಳ್ಳು ಹೇಳಿದರೆ ಎಂಬ ಕುತರ್ಕಕ್ಕೆ ಉತ್ತರ ನೀಡಲು ಭಯವಾಗುತ್ತದೆ. ಹಾಗಾಗುವುದೂ ಉಂಟು. ಅಂಥದು ಕೋಟಿಗೊಂದು- ರಾಷ್ಟ್ರಕ್ಕೆರಡು.

ಮನೆಗೆ ಬಂದ ಅತಿಥಿಗೆ 'ಮಣೆ' ಇತ್ತು ಚಾಪೆ ಹಾಸಿ, ಕುಳ್ಳಿರಿಸಿ ಬಂದಿದ್ದೇವೆ. ಕೆಲವು ಕಡೆ ಚಾಪೆಯ ಬದಲು ಕಂಬಳಿ ಹಾಸುತ್ತಾರೆ. ಈಚೆಗೆ ಕುರ್ಚಿಗೆ ಕೈತೋರಿಸುತ್ತೇನೆ. ಅಂತೂ ಬಂದಾತ ನೆಲದಲ್ಲಿ ಕೂರುವುದಿಲ್ಲ. ಆತನ ಗೌರವಕ್ಕೆ ಕುಂದು. ಬಟ್ಟೆ ಕೊಳೆಯಾಗುತ್ತದೆ. ಹಾಗಾಗಿ ಆತನಿಗೆ ಆಸನ ಒದಗಿಸಬೇಕು. ಆಸನ ಕಾಲ ಕಾಲಕ್ಕೆ ಬದಲಾಗುತ್ತದೆ- ಬದಲಾಗಿದೆ. ಪರಿಸ್ಥಿತಿ, ಸನ್ನಿವೇಶಗಳಿಗೆ ಬದಲಾದ ನಡವಳಿಕೆಗಳಲ್ಲಿ ಆಸನವೂ ಒಂದು. ಆದರೆ ಆಸನವೇ ಬೇಡ ಎನ್ನುವವರಿಲ್ಲ. ಯಾಕೆಂದರೆ ಹೊರಗಿನಿಂದ ದಣಿದು ಬಂದವನ ಶರೀರದ ಉಷ್ಣತೆಗೆ ಒಮ್ಮೆಲೇ ನೆಲದ ತಣುಪು ಬೆನ್ನುಹುರಿಯ ಮೂಲಕ ಅಡರಿದರೆ ನರಗಳ ದೌರ್ಬಲ್ಯ ಉಂಟಾಗಬಹುದು. ಎಂಬುದು ವೈಜ್ಞಾನಿಕ ಸತ್ಯ. 'ರಕ್ತ ಪರಿಚಲನೆಯಲ್ಲಿ ಏರುಪೇರಾಗುತ್ತದೆ' ಎಂದು ವೈದ್ಯಶಾಸ್ತ್ರ ಹೇಳುತ್ತದೆ. ಯಾವ ವೈದ್ಯನೂ ಬರಿನೆಲದಲ್ಲಿ ಮಲಗಿಸಿ ರೋಗಿಯನ್ನು ಪರೀಕ್ಷಿಸಲಾರ.

ಬಂದ ಅತಿಥಿಯನ್ನು ಆಸನವಿತ್ತು ಕುಳ್ಳಿರಿಸಿ ಕುಶಲ ಪ್ರಶ್ನೆ ಕೇಳಿ ಹಿರಿಯನಾದರೆ ನಮಸ್ಕರಿಸಿ, ಕಿರಿಯನಾದರೆ- ಸಮಾನನಾದರೆ ಹಸ್ತಲಾಘವವಿತ್ತು ಆತನನ್ನು ಸಂತಸಪಡಿಸುತ್ತೇವೆ. ಕೈಕುಲುಕುವಿಕೆ ಅಭಾರತೀಯವಲ್ಲ. ಅದು ನಮ್ಮದೇ ರೀತಿ. ಅದು ಹೊಸ ಕ್ರಮದಲ್ಲಿ, ರೂಪದಲ್ಲಿ ಜಾರಿಗೆ ಬಂದಿದೆಯಷ್ಟೆ. ನಮ್ಮ ಆತ್ಮೀಯತೆಯನ್ನು ಅಂಗೈ ಮೂಲಕ ಹಸ್ತಾಂತರಿಸಿ 'ಆಸರೆಗೆ ಕೊಡುತ್ತೇವೆ' ಅಥವಾ 'ಬಾಯಾರಿಕೆ' ಗೆ ಕೊಡುತ್ತೇವೆ. ಇಲ್ಲಿನ ಪದಗಳು- 'ಆಸರೆಗೆ', 'ಬಾಯಾರಿಕೆಗೆ' ಕೊಡುತ್ತೇನೆ- ಸರಿಯೆ ? ಎಂದು ಯೋಚಿಸುವ. ಆಸರೆ ಅಂದರೆ ಆಧಾರ, ಆಶ್ರಯವೆಂದಾಗುತ್ತದೆ. ಬಹುಶಃ ಅದು 'ಅಸಳೆ' ಎಂದಾಗಬೇಕು. ಆಗ ಸರಿಬರುತ್ತದೆ. ಯಾಕೆಂದರೆ 'ಅಸಳೆ' ಎಂದರೆ ದುರ್ಬಲ, ಶಕ್ತಿಹೀನ ಎಂದರ್ಥ. 'ಅಸಳೆಗೆ ಕೊಡುವುದು' ಎಂದರೆ ಬಂದಿರುವ ವ್ಯಕ್ತಿಯಲ್ಲಿ ಪ್ರಯಾಣದಿಂದ ಉಂಟಾದ ದುರ್ಬಲತೆಯನ್ನು ದೂರಮಾಡಲು ಸಹಾಯಕವಾದ 'ಕುಡಿಯುವುದನ್ನು' ಕೊಡುವುದು. 'ಬಾಯಾರಿಕೆಗೆ ಕೊಡುವುದು' ಅರ್ಥವಾಗುತ್ತದೆ. ತುಳುನಾಡಿನಲ್ಲಿ 'ತೃಷೆಗೆ ಕೊಡುವುದು' ಎಂಬ ಪದವಿದೆ. ಇದು ಬಾಯಾರಿಕೆಗೆ ಸಮಾನಾರ್ಥವಾದ ಸಂಸ್ಕೃತ ಪದ.

ಹಾಗೆ ಬಾಯಾರಿ, ತೃಷೆಯೇರಿ ಬಂದರೆ 'ಅಸಳೆ'ಗೆ ಕುಡಿಯಲು ಕೊಡುವುದೇನು ? ಹಾಲಲ್ಲ ಪಾಯಸವಲ್ಲ. ಕಾಫಿ ಚಹಾ ಮುಂತಾದುವೂ ಸಲ್ಲ. ನೀರು, ಶರಬತ್ತು, ಇತ್ಯಾದಿ ಕೊಡಬೇಕು. ಅವು ತೃಷೆಯನ್ನು ಪರಿಹರಿಸುವುದ ಜೊತೆಗೆ ಅಸಳೆಯನ್ನು ದೂರ ಮಾಡುತ್ತದೆ. ಮಲೆನಾಡಿನಲ್ಲಿ ಘಟ್ಟದ ಕೆಳಗೆ, ಇತರ ಕೆಲವು ಕಡೆಗಳಲ್ಲಿ ಸಹ ಬಾಯಾರಿಕೆಗೆ 'ಬೆಲ್ಲ – ನೀರು' ಕೊಡುತ್ತಾರೆ. ಬೆಲ್ಲ ತಿಂದು ನೀರು ಕುಡಿಯುತ್ತಾರೆ. ಕಾರಣ: ಬೆಲ್ಲವು ಸಿಹಿಯಾದುದರಿಂದ ಒಣಗಿದ ಬಾಯಲ್ಲಿ ಜೊಲ್ಲುರಸ ಸ್ರವಿಸುವಂತೆ ಲಾಲಾಗ್ರಂಥಿಗಳನ್ನು ಪ್ರೇರಿಸಿ ಗಂಟಲು ತೇವವಾಗುವಂತೆ ಮಾಡುತ್ತದೆ. ಹಾಗಿಲ್ಲದಿದ್ದರೆ ಒಣಗಂಟಲಿಗೆ ನೀರು ಬಿದ್ದರೆ ನೀರೂ ಸಿಕ್ಕಿಹಾಕಿ ಕೊಳ್ಳುವುದುಂಟು. ಬಹುಶಃ ಹಾಗಾಗಿಯೇ 'ತಣ್ಣೀರನ್ನಾದರೂ ತಣಿಸಿ ಕುಡಿಯಬೇಕು'- ಎಂದ ಗಾದೆ ಹುಟ್ಟಿರಬೇಕು. ಇಲ್ಲಿ 'ತಣಿಸಿ' ಎಂದರೆ ಗಂಟಲನ್ನು ತಣಿಸಿ, ಮೈಯನ್ನು ತಣಿಸಿ, ಎಂದರ್ಥ ಮಾಡಬೇಕು. ಈ ವ್ಯಾವಹಾರಿಕ, ವೈಜ್ಞಾನಿಕ ಸತ್ಯವನ್ನು, ತಿಳಿದೋ ತಿಳಿಯದೆಯೋ ನಮ್ಮವರು ನಡವಳಿಕೆಯಾಗಿ ಇರಿಸಿಕೊಂಡಿದ್ದಾರೆ. ಕಾಲ, ದೇಶ, ಪರಿಸ್ಥಿತಿಗೆ ತಕ್ಕಂತೆ ತುಸು ಬದಲಾವಣೆಗಳು ಆಗಿದ್ದರೂ ಈ ನಡವಳಿಕೆ ಜಾರಿಯಲ್ಲಿರುವುದು ಹಿಂದಿನ ನಡವಳಿಕೆಯ ಬಲದಿಂದಲೇ.

★

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರು. 1500 ಹಣ ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿಯುಳ್ಳ ಬಂಗಾರದ ಪದಕ ಕೊಡಲ್ಪಡುತ್ತದೆ. ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಬಿಡಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

# ಬಯಲಾಟ

ಶ್ರೀ ಕೆ. ಎಸ್. ರಾಮಮೂರ್ತಿ
ಎಂ.ಎ;

ಬಯಲಿನಲ್ಲಿ ನಡೆಯುವ ನಾಟಕವನ್ನು ಬಯಲಾಟವೆನ್ನುತ್ತಾರೆ. ಇದೊಂದು ಇದೊಂದು ಗ್ರಾಮೀಣ ನಾಟಕ. ಸಂಕೀರ್ಣವಾದ ಜನಪದ ಕಲೆ. ಇದರಲ್ಲಿ ಸಂಗೀತ, ಸಾಹಿತ್ಯ, ಅಭಿನಯ ಮತ್ತು ನೃತ್ಯವಿದೆ. ಕರ್ನಾಟಕದ ಪ್ರಮುಖ ಜನಪದ ರಂಗಭೂಮಿ ಪ್ರಕಾರವಾದ ಬಯಲಾಟವು ಹೆಚ್ಚಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಕಾಣಸಿಗುತ್ತದೆ. ಜನಪದ ಸತ್ವವನ್ನು ಮೈಗೂಡಿಸಿಕೊಂಡ ಈ ಕಲೆ ಜನಪದ ಜೀವನಕ್ಕೆ ಹಿಡಿದ ಕನ್ನಡಿಯಂತಿದೆ. ಕರ್ನಾಟಕ ಜನತೆಯ ಸಂಸ್ಕೃತಿಯ ಅಧ್ಯಯನಕ್ಕೆ ಇದು ಅಮೂಲ್ಯ ವಿಷಯಗಳನ್ನು ನೀಡಬಲ್ಲದು. ಮನರಂಜನೆಯು ಇದರ ಮೂಲ ಉದ್ದೇಶವಾದರೂ ಜನತೆಗೆ ಪರೋಕ್ಷ ಶಿಕ್ಷಣವನ್ನು ನೀಡುತ್ತದೆ.

ಬಯಲಾಟವು ಆಂಧ್ರಪ್ರದೇಶದ 'ವೀಧಿ ನಾಟಕ'ವನ್ನು ತಮಿಳುನಾಡಿನ 'ತಿರುಕ್ಕೂತ್ತು'ವನ್ನು ಮತ್ತು ಕೇರಳದ ಕಥಕ್ಕಳಿಯನ್ನು ಹೋಲುತ್ತದೆ. ಬಯಲಾಟವನ್ನು ದೊಡ್ಡಾಟ. ಸಣ್ಣಾಟ, ಯಕ್ಷಗಾನ, (ಇದು ಬಯಲಾಟದ ಶಾಖೆಯಾಗಿ ಇಂದು ಬಹುಪ್ರಸಿದ್ಧವಾಗಿದೆ) ಅಟ್ಟದಾಟ, ಕೇಳಿಕೆ, ಭಾಗವತರಾಟ, ಮೂಡಲಪಾಯ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ಹೆಸರುಗಳು ಪ್ರಾದೇಶಿಕ ವೈಶಿಷ್ಟ್ಯವನ್ನು ಸೂಚಿಸುತ್ತವೆ. ಇದರ ಮೂಲವನ್ನು ವಿದ್ವಾಂಸರು 'ಕರಪಾಲಮೇಳ'ದಲ್ಲಿ ಮತ್ತು ಕಥಾಕಾಲಕ್ಷೇಪದಲ್ಲಿ ಗುರುತಿಸುತ್ತಾರೆ.

ಇದೊಂದು (ಬಯಲಾಟ) ಸರಳ ಸುಂದರವಾದ ರಂಗಭೂಮಿ. ಎತ್ತರದ ಸ್ಥಳವೊಂದರ ಮೇಲೆ ನಾಲ್ಕು ಗಳುಗಳನ್ನು ನೆಟ್ಟು ಚಪ್ಪರ ಹಾಕಿ, ಹಿಂಬದಿಗೊಂದು ಪರದೆಯನ್ನು ತೂಗುಬಿಟ್ಟಿರುತ್ತಾರೆ. ಅತ್ತಿತ್ತ ಪಂಜುಗಳನ್ನು, ದೀವಟಿಗೆಗಳನ್ನು ಬೆಳಕಿಗಾಗಿ ಇರಿಸುತ್ತಾರೆ. ಈಚೆಗೆ ಪೆಟ್ರೋಮ್ಯಾಕ್ಸ್ ದೀಪಗಳನ್ನು ವಿದ್ಯುದ್ದೀಪಗಳನ್ನು ಉಪಯೋಗಿಸುತ್ತಿದ್ದಾರೆ.

ಪೌರಾಣಿಕ ಕಥೆಗಳಿಂದಾಯ್ದ ಪ್ರಸಂಗಗಳ ಬಯಲಾಟಗಳೇ ಹೆಚ್ಚು. ಇದಲ್ಲದೆ ಜನಪದ ಕಥಾಭಂಡಾರದಿಂದಾಯ್ದ ಸಾಮಾಜಿಕ ವಸ್ತುವಿನಿಂದ ಕೂಡಿದ ಪ್ರಸಂಗಗಳನ್ನಾಡುವರು. ನಿರ್ದಿಷ್ಟ ಸಾಹಿತ್ಯವಿರುವುದಿಲ್ಲ. ಕಂಠಗತವಾಗಿರುತ್ತದಷ್ಟೆ.

ಪಾತ್ರಗಳ ವೇಷಭೂಷಣಗಳು ಕಲಾತ್ಮಕವೂ, ವರ್ಣರಂಜಿತವೂ ಆಗಿರುತ್ತದೆ. ಪಾತ್ರದ ಗುಣಕ್ಕೆ ತಕ್ಕ ಬಣ್ಣದ ಬಳಕೆ, ವೇಷಭೂಷಣಗಳನ್ನು ತೊಡುವ, ಬಣ್ಣಗಳನ್ನು ಹಚ್ಚಿಕೊಳ್ಳುವ ಮನೆಯನ್ನು 'ಚೌಕಿ'ಎನ್ನುತ್ತಾರೆ- (Chowki) ಇದು ರಂಗ ಮಂಟಪಕ್ಕೆ ತುಸುದೂರದಲ್ಲಿರುತ್ತದೆ. ಪಾತ್ರಗಳಲ್ಲಿ ವೈವಿಧ್ಯವಿರುತ್ತದೆ. ದೇವ – ದೇವತೆಯರು, ಅರಸ – ಅರಸಿಯರು, ರಾಜಕುಮಾರ – ಕುಮಾರಿಯರು, ಸಖ – ಸಖಿಯರು, ಋಷಿ – ಮುನಿಗಳೂ, ಮಂತ್ರಿ ಮಹೋದಯರು. ರಾಕ್ಷಸರು, ವಿದೂಷಕರೇ ಮೊದಲಾದ ಪಾತ್ರಗಳಿರುತ್ತವೆ. ವಿದೂಷಕನನ್ನು ಕೋಡಂಗಿ, ಸಾರಥಿ. ಹಾಸ್ಯಗಾರ, ಹನುಮನಾಯಕನೆಂದು ಕರೆಯುತ್ತಾರೆ.

ಹಾರ್ಮೋನಿಯಂ, ತಬಲಾ, ದಪ್ಪು, ಮದ್ದಲೆ, ಜಾಗಟೆ, ತಾಳ, ಪುಂಗಿ, ಚಂಡೆ ಮತ್ತು ಮುಖವೀಣೆ ಮೊದಲಾದ ವಾದ್ಯಗಳನ್ನುಪಯೋಗಿಸುವರು. ತಾಳ ಹಿಡಿದ ಭಾಗವತ ಅಥವಾ ಸೂತ್ರಧಾರನೊಂದಿಗೆ ವಾದ್ಯಗಾರರು ರಂಗ ಮಂಚದ ಎರಡೂ ಕಡೆಗಳಲ್ಲಿ ಕುಳಿತಿರುತ್ತಾರೆ.

ಬಯಲಾಟವು ರಾತ್ರಿಯಿಂದ ಬೆಳಗಿನವರೆವಿಗೂ ನಡೆಯುತ್ತದೆ. ವೇಷಧಾರಿಗಳನ್ನು 'ಚೌಕಿ'ಮನೆಯಿಂದ ರಂಗಮಂಟಪಕ್ಕೆ ವಾದ್ಯ ಸಮೇತ ಕರೆದೊಯ್ಯುವರು. ಇದೊಂದು ಚಿತ್ತಾಕರ್ಷಕ ಮೆರವಣಿಗೆ.

ಭಾಗವತ ಅಥವಾ ಸೂತ್ರಧಾರ ಬಯಲಾಟದ ನಿರ್ದೇಶಕ ಹಾಗೂ ಮೇಲ್ವಿಚಾರಕ ಪ್ರದರ್ಶನ ಆದ್ಯಂತದವರೆವಿಗೂ ಇದ್ದೇ ಇರುತ್ತಾನೆ. ಸೂತ್ರಧಾರನ ದೇವತಾ ಸ್ತುತಿಯಿಂದ ಬಯಲಾಟ ಪ್ರಾರಂಭವಾಗುತ್ತದೆ. ಪಾತ್ರಗಳನ್ನು ಪ್ರೇಕ್ಷಕರಿಗೆ ಸೂತ್ರಧಾರನು ಪರಿಚಯಿಸುತ್ತಾನೆ. ನಡು ನಡುವೆ ಕಥೆಯನ್ನು ವಿವರಿಸುತ್ತಾನೆ. ಹಾಡುತ್ತಾನೆ. ಮೇಳದ ತಾಳವನ್ನು ನಿಯಂತ್ರಿಸುತ್ತಾನೆ. ಇವನ ಹಾಡಿಗೆ, ತಾಳಕ್ಕೆ ತಕ್ಕಂತೆ ವೇಷಧಾರಿಗಳು ಕುಣಿಯುವರು, ಅಭಿನಯಿಸುವರು. ಸಂಭಾಷಣೆ ಅಭಿನಯಗಳ ಮೂಲಕ ಬಯಲಾಟದ ಕ್ರಿಯೆ ಸಾಗುತ್ತದೆ. ನವರಸಗಳಿಂದ ಕೂಡಿರುತ್ತದೆ. ದೇವ ದೇವತೆಗಳ ಅರಸ – ಅರಸಿಯರ ಪಾತ್ರಗಳಲ್ಲಿ ಗಾಂಭೀರ್ಯದ ಅಭಿನಯವನ್ನು ರಾಕ್ಷಸ, ವಿರೋಧಿ, ರೌದ್ರ ಪಾತ್ರಗಳಲ್ಲಿ ಭೀಭತ್ಸ ಅಭಿನಯವನ್ನು ಕಾಣಬಹುದು. ರೌದ್ರ ಪಾತ್ರಗಳು ಪಂಜಿನ ಮಬ್ಬು ಬೆಳಕಿನಲ್ಲಿ ರಣವಾದ್ಯಗಳ ಅಬ್ಬರದ ಸದ್ದಿನೊಂದಿಗೆ ರಂಗಮಂಟದ ಮುಂಭಾಗದಿಂದಲೇ ಪ್ರವೇಶಿಸುತ್ತವೆ. ಅಥವಾ ಹಠಾತ್ತನೆ ಪ್ರವೇಶಿಸುತ್ತವೆ. ಹಾಸ್ಯ ಪಾತ್ರಗಳು ತಮ್ಮ ವಿಚಿತ್ರ ವೇಷಭೂಷಣಗಳಿಂದ, ಕೊಂಕು ಮಾತುಗಳಿಂದ ಮುಖಭಾವಗಳಿಂದ ಚೇಷ್ಟೆಗಳಿಂದ ಪ್ರೇಕ್ಷಕರನ್ನು ನಗೆಯಲ್ಲಿ ಮುಳುಗಿಸುವರು. ಇದರಿಂದ ಪ್ರೇಕ್ಷಕರಿಗೆ ಏಕತಾನತೆ ತಪ್ಪಿ ಹಗುರಗೊಳ್ಳುತ್ತಾರೆ. ಸೂತ್ರಧಾರನ ಮಂಗಳದೊಂದಿಗೆ ಬಯಲಾಟ ಮುಕ್ತಾಯಗೊಳ್ಳುವುದು.' ಜನಪದರ ಜೀವನಾಡಿಯಾದ ಈ ಶ್ರೀಮಂತ ಕಲೆ ನಾನಾ ಕಾರಣಗಳಿಂದಾಗಿ ಜನಪದರಿಂದ ದೂರವಾಗುತ್ತಿದೆ.

(14 ನೇ ಪುಟದಿಂದ)

(ಭಕ್ತಿ) ಅಳಿದಳಿದು ಸುಸ್ತಾಗಿ ಆ ಪಡಿಯನ್ನೇ ತಲೆದಿಂಬಾಗಿಟ್ಟುಕೊಂಡು ಮಲಗಿರುವನಂತೆ.

ಬೇರೊಂದು ಕಡೆ ಬೇರೊಂದು ರೀತಿಯಲ್ಲಿ ಈ ವ್ಯವಹಾರದ ಚಿತ್ರಣ ಪುರಂದರದಾಸರ ಕೀರ್ತನೆಯಲ್ಲಿ ಬಂದಿರುವುದನ್ನು ಕೆಳಗಿನ ಕೀರ್ತನೆಯಲ್ಲಿ ಕಾಣಬಹುದು.

ಕಾಯವಂಚಿಸಿಕೊಳಲು ಬಲು
ರಾಯರುಗಳಲಿ ಹೇಳು ಎಂದೆನಲು
ನ್ಯಾಯಕ್ಕೆ ನುಡಿವೆ ನೆಂದೆನಲು ಬಲು
ಗಾಯತನದಿಂದ
ಕೋಣೆಯೊಳ್ದೊಗಲು
ಉಟ್ಟದ್ದು ಬಿಟ್ಟುನಿಂದಿರಲು ಬಲು
ಕೆಟ್ಟೆನೆಂದು ಕುದುರೆಯ ಪಿಡಿದಿರಲು
ಘಟ್ಟಿಗ ಪುರಂದರವಿಠಲನಿರಲು

ಮತ್ತೊಂದೆಡೆ ಪುರಂದರದಾಸರು ಇದೇ ರೀತಿಯಾಗಿ

ಕಾಲತೂಗಿ ಭೂಮಿ ದಾಡೆಯೊಳಿಟ್ಟರೆ
ಮೇಲೆನೆಗೆದು ಬಾಯಿಬಿಟ್ಟರೆ
ಕೊಕಳಗೊಯಿಕ ಪೂರ್ವಸಾಲವ
ಕೊಡದೆ

ತಿರುಗೋದು ವನವನ ಉಚಿತವೆ
ಎರಡೇಳು ವರ್ಷಕ್ಕೆ ಎನಗೆ ನೀ ಸಿಕ್ಕಿದೆ
ಒರಳಿಗೆ ಕಟ್ಟದೆ ಬಿಡುವೆನೆ ಕಳ್ಳ?
ಬತ್ತಲೆ ನಿಂತರೂ ಬಿಡುವೆನೆ । ಬೆ
ನ್ನಹತ್ತಿ ನಿನಗೆ ಸದಾ ತಿರುಗುವೆ
ಹತ್ತಿದ ಕುದುರೆ ಸಹಿತವಾಗಿ ಹಿಡಿತಂದು
ಚಿತ್ತಕ್ಕೆ ಕಟ್ಟುವೆ ಪುರಂದರವಿಠಲ

ಎಂದು ಚಿತ್ರಿಸಿರುವರು. ಪುರಂದರದಾಸರು ಶ್ರೀರಂಗಪಟ್ಟಣದಲ್ಲಿ ರಂಗನಾಥನು ತಾನು ಭಕ್ತರಿಗೆ ಕೊಡಬೇಕಾದ ಬಡ್ಡಿಹಣವನ್ನು ಅಳಿದಳಿದು ಸೋತು ಮಲಗಿರುವನೆಂದು ವರ್ಣಿಸಿದರೆ, ಕನಕದಾಸರು ದಶಾವತಾರಗಳ ಆಯಾಸ ಪರಿಹಾರಕ್ಕಾಗಿ ಅಲ್ಲಿ ಬಂದು ಮಲಗಿ ವಿಶ್ರಾಂತಿ ಪಡೆಯುತ್ತಿರುವನೆಂದು ವರ್ಣಿಸಿರುವರು. ಈ ಭಾವನೆಯುಳ್ಳ ಕೀರ್ತನೆಯಲ್ಲಿ "ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ, ಜಗದೇಕ ವಿಖ್ಯಾತ ಪಶ್ಚಿಮ ರಂಗನಾಥ'' ಎಂದು ಚಕಿತರಾಗಿ ದೇವರನ್ನು ಪ್ರಶ್ನಿಸಿ 'ಇನ್ನಿಷ್ಟು ಕಾಲ ನೀನಿಲ್ಲಿ ಮಲಗಿದ್ದರೂ ನಿನ್ನನೆಬ್ಬಿಸುವವರೊಬ್ಬರನು ಕಾಣೆ, ಉನ್ನಂತ ಕಾಗಿನೆಲೆಯಾದಿಕೇಶವರಾಯ ಚನ್ನ ಶ್ರೀರಂಗಪಟ್ಟಣದ ರಂಗಧಾಮ' ಎಂದು ನಮಿಸಿರುವರು. ಇಲ್ಲಿನ ನಿಂದಾಸ್ತುತಿಯ ನೈಪುಣ್ಯ ಪ್ರಶಂಸನೀಯವಾಗಿದೆ.

ಇಲ್ಲಿಯವರೆಗೆ ದಾಸರಲ್ಲಿ ದಶಾವತಾರಗಳನ್ನು ಕುರಿತ ನಿಂದಾಸ್ತುತಿಯ ವಿಹಂಗಮ ನೋಟವನ್ನು ಬೀರಿದ್ದಾಯಿತು. ಈಗ ಶ್ರೀ ಕೃಷ್ಣನನ್ನು ಕುರಿತ ನಿಂದಾಸ್ತುತಿಯ ಸಾಹಿತ್ಯವನ್ನು ಸವಿಯೋಣ. ಭಗವಂತನನ್ನೇ ಬೆದರಿಸುವಂತೆ ತೋರುವ ಶ್ರೀಪಾದರಾಯರ ಈ ಕೃತಿಯನ್ನು ನೋಡಿ.

ವಾಸುದೇವ ನಿನ್ನ ಮರ್ಮ ಕರ್ಮಂಗಳ
ದೇಶದೇಶದಲ್ಲಿ ಪ್ರಕಟಿಸಲೋ ||ಪ||

ಬೇಸರದೆ ಎನ್ನ ಹೃದಯ ಕಮಲದಲ್ಲಿ
ವಾಸವಾಗಿ ಸುಮ್ಮನಿದ್ದೀಯೋ || ಅ.ಪ ||
ತರಳತನದಲ್ಲಿದ್ದು ದುರುಳನಾಗಿ ಬಂದು
ಒರಳಿಗೆ ಕಟ್ಟಿಸಿಕೊಂಡುದನು
ತುರುವ ಕಾಯಲು ಪೋಗಿ ಕಲ್ಲಿಯೋಗರವನು
ಗೊಲ್ಲರ ಕೂಡೆ ನೀ ಉಂಡುದನು
ನೆರೆಮನೆ ಹೊರಮನೆಗಳ ಪೊಕ್ಕು ಬೆಣ್ಣೆಯ
ಅರಿಯದಂತೆ ಕದ್ದು ಮೆದ್ದುದನು
ಕೆರಳಿಸಿದೆಯಾದರೆ ಒದುರುವೆ ಎಲೊ || ವಾಸು ||
ಹರಿಯನ್ನು ಬಾಯಿಗೆ ಬಂದುದನು
ಕಟ್ಟಿ ಕರೆವ ಏಳು ದಿನದ ಮಳೆಗೆ ಪೋಗಿ
ಬೆಟ್ಟವ ಪೊತ್ತದ್ದು ಹೇಳಲೋ
ಅಟ್ಟೆಸಿಕೊಳ್ಳುತ ಯಾಗಶಾಲೆಗೆ ಪೋಗಿ
ಹೊಟ್ಟೆಯ ಮಾರಿದದ್ದು ಹೇಳಲೋ
ದುಷ್ಟಹಾವಿನ ಹೆಡೆಯನು ತುಳಿದಾಡಿದ
ದುಷ್ಟತನವನು ಹೇಳಲೋ
ನೆಟ್ಟನೆ ಅಂಬರಕೆತ್ತಿದನ ಹೊಯ್ದು
ಹಿಟ್ಟು ಕುಟ್ಟಿಟ್ಟುದ ಹೇಳಲೋ

ಇದೇ ಸರಣಿಯಲ್ಲಿ ಈ ಸಿಡಿದಾದ ಕೃತಿ ಮುಂದುವರಿಯುತ್ತದೆ. ಭಗವಂತನ ಲೀಲೆಗಳನ್ನು ಹಾಡಿಹೊಗಳಿ ತಣಿಯುವುದು ಒಂದು ತೆರನಾದರೆ ಅದೇ ಸಂದರ್ಭಗಳನ್ನು ಮೇಲಿನ ರೀತಿಯಲ್ಲಿ (ನಿಂದಾಸ್ತುತಿ) ಎತ್ತಿ ಹಾಡಿ ಹೊಗಳುವುದು ಮತ್ತೊಂದು ತೆರನಾಗಿದೆ. ಮತ್ತೊಂಡೆಡೆ ಶ್ರೀಪಾದರಾಜರು ನಮಗೆ ಕುಲವೊಂದಿರುವಂತೆ ದೇವರಲ್ಲೂ ಒಂದು ಕುಲವನ್ನರಸಲು ಹೋಗಿ ಆತನ ತುಂಟಾಟಗಳನ್ನು ನೋಡಿ ಏನು ಹೇಳಲಾಗದೆ ನಗುತ್ತ ವಿಡಂಬಿಸಿರುವರು.

ಆವ ಕುಲವೆಂದರಿಯಬಾರದು
ಗೋವ ಕಾವ ಗೊಲ್ಲನಂತೆ
ದೇವಲೋಕದ ಪಾರಿಜಾತದ
ಹೂವ ಸತಿಗೆ ತಂದನಂತೆ
ಗೋಕುಲದಲ್ಲಿ ಪುಟ್ಟಿದನಂತೆ
ಗೋವ್ಗಳನ್ನು ಕಾಯ್ದನಂತೆ
ತಾ ಕೊಳಲೂದಿ ಮೃಗಪಕ್ಷಿಗಳಾ
ನೀಕ ಮರಗಳ ಮಾಡಿದನಂತೆ
ತರಳತನದಿ ಒರಳ ನೆಗಹಿ
ಮರನ ಮುರಿದು ಮತ್ತೆ ಹಾರಿ
ತೆರೆದ ಬಾಯೊಳಗೀರೇಳು ಲೋಕವ
ನರಸಿ ತಾಯಿಗೆ ತೋರ್ದನಂತೆ
... ... ... ...
ಗೊಲ್ಲತೆಯರ ಮನೆಯ ಪೊಕ್ಕು
ಕಳ್ಳತನವ ಮಾಡಿದನಂತೆ
ಬಲ್ಲಿದ ಪೂತನಿ ವಿಷವನುಂಡು
ಮೆಲ್ಲನೆ ತೃಣನ ಕೊಂದನಂತೆ

ಇಲ್ಲಿ ಶ್ರೀಕೃಷ್ಣಾವತಾರದ ಒಂದೊಂದು ಘಟನೆಯೂ 'ಅಂತೆಯಕಂತೆ'ಯಲ್ಲಿ ವಿನೋದಮಯವಾಗಿ ಮೂಡಿಬಂದಿದೆ. ಇಲ್ಲಿ ಭಕ್ತ ಭಗವಂತರ ನಡುವೆ ಇರುವ ಸಖ್ಯಭಾವದ ಸಲಿಗೆಯನ್ನು ನೋಡಬಹುದಾಗಿದೆ. ಇಡೀ ರಚನೆ ಚಾತುರ್ಯ ಪೂರ್ಣವಾಗಿ, ಸರಸಮಯವಾಗಿರುವುದು ಎಂಥಹರವರನ್ನಾದರೂ ತಲೆದೂಗಿಸುವಂತಿದೆ.

ವ್ಯಾಸರಾಯರು ತಮ್ಮದೊಂದು ಉಗಾಭೋಗದಲ್ಲಿ ಭಗವಂತನು 'ಪತಿತಪಾವನ' ನೆಂಬುದನ್ನು ಚಿತ್ರಿಸಿರುವರು. ಅರಿತೋ ಅರಿಯದೆಯೋ ಪಾಪ ಮಾಡಿದವರನ್ನು ಕರುಣೆಯಿಂದ ಉದ್ಧಾರಮಾಡುವುದು ಭಗವಂತನ ಹೊಣೆ. (ರಾವಣ, ದುರ್ಯೋಧನ ಮೊದಲಾದವರನ್ನು ಉದ್ಧಾರಮಾಡಿಲ್ಲವೆ?) ಪತಿತರ ಬಗ್ಗೆ ಅನುಕಂಪದಿಂದ ಭರವಸೆಯ ಮಾತುಗಳನ್ನು ನುಡಿದಿರುವರು. ಇದನ್ನು 'ಅಭಯವಚನ'ವೆನ್ನಲು ಅಡ್ಡಿಯಿಲ್ಲ.

ಜಾರತ್ವವನ್ನು ಮಾಡಿದ ಪಾಪಿಗಳಿಗೆಲ್ಲ
ಚೋರತ್ವವನ್ನು ಮಾಡಿದ ಪಾಪಿಗಳಿಗೆಲ್ಲ
ನವನೀತಚೋರನೆಂದರೆ ಸಾಲದೆ
ಕ್ರೂರತ್ವವನು ಮಾಡಿದ ಪಾಪಿಗಳಿಗೆಲ್ಲ
ಮಾವನ ಕೊಂದವನೆಂದರೆ ಸಾಲದೆ
ಪ್ರತಿದಿವಸ ಮಾಡಿದ ಪಾಪಗಳಿಗೆಲ್ಲ
ಪತಿತಪಾವನನೆಂದರೆ ಸಾಲದೆ
ಇಂತಿಪ್ಪ ಮಹಿಮೆಯೊಳೊಂದನಾದರೂ ಒಮ್ಮೆ
ಸಂತತ ನೆನೆವರ ಸಲಹುವ ಸಿರಿಕೃಷ್ಣ

ಈ ನಿಂದಾಸ್ತುತಿಯ ನೈಪುಣ್ಯ ರಮಣೀಯ ವಾಗಿದೆ. ಶ್ರೀವ್ಯಾಸರಾಯರು ಸಾದೃಶ್ಯಗಳ ಜಾಣ್ಮೆಯಿಂದ ನೀತಿಬೋಧೆಯನ್ನು ಮಾಡಿ ರುವುದು ಆಪ್ಯಾಯಮಾನವಾಗಿದೆ. ಪತಿತ ರಾದವರ ಮನಸ್ಸನ್ನು ಒಲಿಸಿಕೊಳ್ಳಲು ಇದಕ್ಕಿಂತ ಹಿತವಾದ ಉಕ್ತಿ ಮಾರ್ಗ ಬೇರೆ ಇಲ್ಲವೆಂದು ಧೈರ್ಯವಾಗಿ ಹೇಳಬಹುದು. ಶೇಷಶಯನನೂ, ಭಕ್ತಿಪ್ರಿಯನೂ, ಕಂಸಾ ರಿಯೂ, ನಂದಕುಮಾರನೂ, ಅನಂತಲೀಲಾ ಪುರುಷನೂ ಆದ ಶ್ರೀಕೃಷ್ಣನನ್ನು ಕೊಂಡಾ ಡಿರುವುದು ಪುರಂದರದಾಸರ 'ಏನು ಮರು ಳಾದ್ಯಮ್ಮ ಎಲೆ ರುಕ್ಮಿಣಿ' ಎನ್ನುವ ಕೀರ್ತನೆಯಲ್ಲಿ ಕಂಡು ಬರುತ್ತದೆ.

ಏನು ಮರುಳಾದ್ಯಮ್ಮ ಎಲೆ ರುಕ್ಮಿಣಿ
ಹೀನಕುಲಗೊಲ್ಲ ಗೋಪಾಲಕೃಷ್ಣನಿಗೆ
ಹಾಸಿಕಿಲ್ಲದೆ ಹಾವಿನ ಮೇಲೆ ಒರಗಿದವ
ಹೇಸಿಕಿಲ್ಲದೆ ಕರಡಿಯ ಕೂಡಿದ
ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಯ ಲುಂಡು
ದೋಷಕಂಜದೆ ಮಾವನ ಶಿರ ತರಿದವನಿಗೆ
... ... ... ...
ಒಬ್ಬರಲ್ಲಿ ಹುಟ್ಟಿ ಒಬ್ಬರಲಿ ಬೆಳೆದ
ಒಬ್ಬರಿಗೆ ಮಗನಲ್ಲ ಜಗದೊಳಗೆಲ್ಲ
ಅಬ್ಬರದ ದೈವ ಶ್ರೀಪುರಂದರವಿಠಲನ
ಉಬ್ಬುಬ್ಬಿ ಮದುವ್ಯಾದೆ ಉತ್ಸಾಹದಿಂದ

ಶ್ರೀಕೃಷ್ಣನು ಹಾಸಿಗೆ ಇಲ್ಲದೆ ಹಾವಿನ ಮೇಲೆ ಪವಡಿಸಿದ್ದಾನೆ. ಹೇಸಿಗೆಯಿಲ್ಲದೆ ಕರಡಿಯ ಕುವರಿಯಾದ ಜಾಂಬವತಿ ಯನ್ನು ಮದುವೆಯಾಗಿದ್ದಾನೆ. ದೋಷಕ್ಕೆ ಹೆದರದೆ ಮಾವ ಕಂಸನನ್ನು ಕೊಂದಿದ್ದಾನೆ. ದ್ವಾರಕೆಯಲ್ಲಿ ವಸುದೇವ–ದೇವಕಿಯ ಮಗ ನಾಗಿ ಜನಿಸಿ ನಂದಗೋಪಯಶೋದರ ಮನೆ ಯಲ್ಲಿ ಬೆಳೆದಿದ್ದಾನೆ. ಮಗುವಾಗಿದ್ದಾಗ ಎಲ್ಲರೂ ಗೋಕುಲದಲ್ಲಿ ಅವನನ್ನು ಆಡಿಸಿ ದ್ದಾರೆ. ಇವೇ ಮುಂತಾದ ವರ್ಣನೆಗಳಿಂದ ಶ್ರೀಕೃಷ್ಣನನ್ನು ನಿಂದಿಸುವ ರೂಪದಲ್ಲಿ ಆವನ ಸ್ತುತಿಯೇ ಕಂಡುಬರುತ್ತದೆ.

ಮೋಹನದಾಸರ "ಕೋಲು ಹಾಡು" ಕೃಷ್ಣಾರ್ಜುನರ ಮತ್ತು ರುಕ್ಮಿಣಿ ಸುಭದ್ರೆ ಯರ ಸರಸಸಲ್ಲಾಪದಿಂದ ಮನಮೋಹಕ ವಾಗಿದೆ. ಇಲ್ಲಿನ ಸಂಭಾಷಣೆಗೆ ಪೌರಾಣಿಕ ಕಥೆಯನ್ನು ಉಪಯೋಗಿಸಿಕೊಂಡಿರು ತ್ತಾರೆ. ಆಶ್ವಮೇಧ ಪರ್ವದ ಕಥೆಯ ಸುತ್ತಲೂ ಈ ಹಾಡಿನ ಸ್ವಾರಸ್ಯ ಹರಡಿ ಕೊಂಡಿದೆ. ಕೃಷ್ಣಾವತಾರದ ವರ್ಣನೆಯಲ್ಲಿ ಶ್ರೀಕೃಷ್ಣನ ಅರಮನೆಗೆ ಸುಭದ್ರೆ ತನ್ನ ಪರಿವಾರದೊಡನೆ ಮುಯ್ಯಿ ತರುತ್ತಾಳೆ. ಮುಂದೆ ಸುಭದ್ರೆ ಅತ್ತಿಗೆಯರನ್ನು ಹಾಸ್ಯ ಮಾಡುತ್ತಾಳೆ. ರುಕ್ಮಿಣಿ ನಸುನಗುತ್ತಾ ಬಂದು ಬಾಗಿಲನ್ನು ತೆರೆದು "ಬಂದವರು ಯಾರು" ಎಂದು ಆಶ್ಚರ್ಯದಿಂದ ಪ್ರಶ್ನಿಸು ತ್ತಾಳೆ. ತತ್‌ಕ್ಷಣ ಮಾತಾಡಿ ಕದವನ್ನು ತೆಗೆಯದಿರಲು ಸುಭದ್ರೆಯು "ಅಣ್ಣನ ಮೋಹದ ಒಲುಮೆಯು ಹೆಚ್ಚಾಯಿತು. ಅದಕ್ಕೆ ನೀನು ನಮ್ಮೊಂದಿಗೆ ಮಾತಾಡ ಲೊಲ್ಲೆ" ಎಂದು ಆಕ್ಷೇಪಿಸಿದರೆ "ನಾನೇನು ನಿನ್ನಂತೆ ಸಂನ್ಯಾಸಿಯೊಡನೆ ಓಡಿ ಬರಲಿಲ್ಲ" ಎಂದು ರುಕ್ಮಿಣಿ ಹಾಸ್ಯಮಾಡುವಳು. ಇತ್ತ ಕೃಷ್ಣನು ಅರ್ಜುನನ್ನು ಗೇಲಿಗೆಬ್ಬಿ ಸುತ್ತಾನೆ. ಅದಕ್ಕೆ ಅರ್ಜುನನು "ದನ ಗಾಹಿ ನಿನಗೆ ಅಪರೂಪಕ್ಕೆ ಅರಸೊತ್ತಿಗೆ ಬಂದಿದೆ" ಎಂದು ಮಾತಿನ ಛಟಾಕಿಯನ್ನು ಹಾರಿಸುತ್ತಾನೆ. ಆಗ ಕೃಷ್ಣನು ಸುಮ್ಮನಿರ ಲಾರದೆ "ಅರ್ಜುನ, ನೀನು ಕಬ್ಬಿಣ, ನಮ್ಮ ಸುಭದ್ರೆ ಕನಕ" ಎಂದು ಮಾತಿನ ಮೋಡಿ ಯನ್ನು ಬೇರೆಡೆಗೆ ತಿರುಗಿಸುತ್ತಾನೆ. ಆಗ ಅರ್ಜುನನು ಮಾಡುವ ನಿಂದಾಸ್ತುತಿ ಅಪೂರ್ವವಾಗಿದೆ.

"ನಿನಗೆ ಮನೆಯಿಲ್ಲ, ಮಠವಿಲ್ಲ, ಸಮುದ್ರ ಏನು ನೋಡಿ ಮಗಳನ್ನು ಕೊಟ್ಟ, ಬಲಿ ಇದಕ್ಕೆ ಸಾಕ್ಷಿ. ಕುಲವಿಲ್ಲ, ಗೋತ್ರ ವಿಲ್ಲ. ಹೆಂಡಿರು ಬಹಳ. ರಾಕ್ಷಸರು ಶತ್ರು ಗಳು. ಕುದುರೆಯ ಮೋರೆ, ಹಾವು ಮಂಚ, ನೀನು ಸಿರಿದೇವಿಗೆ ಸಾಟಿಯೇ? ನಿನ್ನ ವಾಹನವು ಹದ್ದು. ಹಾರುವಾಗ ಬಿದ್ದ ರೇನು ಗತಿ? ನಿನ್ನನ್ನು ಹೇಡಿ ಶಿಶುಪಾಲನು ನೂರು ಬೈದ. ನಿನ್ನನ್ನು 'ಕ್ಷೀರ ಶಾಯಿ' ಎಂದು ಕರೆಯುತ್ತಾರೆ. ಅತ್ತೆಮನೆ ಸೇರಿ ಕೊಂಡು ಕರಡಿಯ ಮಗಳನ್ನು ಕೂಡಿದೆ. ಹೆಣ್ಣಾದೆ. ದೊಂಬರಾಟ ಮಾಡಿದೆ. ಹತ್ತು ಅವತಾರಗಳನ್ನು ತಾಳಿದೆ. ನಿನ್ನ ಸಂಸಾರ ನಿನ್ನ ಲೀಲೆಗೆ ತಕ್ಕಂತೆ. ದೊಡ್ಡ ಮಗ ತಲೆ ಹೊಡಕ. ಕಿರಿಮಗ ಚಂಚಲ, ಮೊಮ್ಮಗ ಚಾಡಿಕೋರ, ನಿನ್ನ ಮಗಳು ಗಂಡನ ತಲೆಯೇರಿದ ಗರತಿ. ಸೊಸೆ ಎಲ್ಲರ ನಾಲಿ ಗೆಯ ಮೇಲೆ ನಲಿಯುತ್ತಾಳೆ. ನಾರದ ಮಾತೃ ದ್ರೋಹಿ. ಪ್ರಹ್ಲಾದ ಪಿತೃ ದ್ರೋಹಿ. ಇದು ನಿನ್ನ ಸಂಸಾರ" ಆಗ ಕೃಷ್ಣನು "ಅರ್ಜುನಾ ನಿನಗೆ ತಂಗಿಯನ್ನು ಕೊಟ್ಟು ನಿನ್ನ ಬಂಡಿಯನ್ನು ಕಾದುದಕ್ಕೇ ಇದೀಗ ಒಳ್ಳೆಯ ಉಪಕಾರ" ಒಂದು ಹುಸಿ ಮುನಿಸನ್ನು ತೋರುತ್ತಾನೆ. ಇದು ಸರಸ ವಿನೋದಗಳಿಂದ ಅರ್ಥಾತ್ ರಸಿಕತೆಯಿಂದ ಕೂಡಿದೆ. ಇಲ್ಲಿ ಯಾವುದು ನಿಂದಾರೂಪ ವಾಗಿ ಬಂದಿದೆಯೋ ಅದು ಆವನ ಪಾಡಿಗೆ ಲೀಲೆಯಾಗಿದೆ. ಶುಚಿಯಾದ, ರುಚಿಯಾದ ಮೋಹನ ದಾಸರ ಈ ಹಾಡಿನ ರಸಿಕತೆಗೆ ತಲೆದೂಗದವರುಂಟೆ? ಒಟ್ಟಾರೆ ಈ ಹಾಡು ಒಂದು ರಸಖಂಡವಾಗಿ ಉತ್ಕೃಷ್ಟವಾಗಿದೆ.

---

## ಯೋಗ ಮೀಮಾಂಸೆ

# ಯೋಗ ಎಂದರೇನು?

ಕುಮಾರಿ ಟಿ. ಎನ್. ಮಹಾಲಕ್ಷ್ಮಿ

ಭಾರತದಲ್ಲಿ ಜನಿಸಿದ ಯೋಗಶಾಸ್ತ್ರವು ಇಂದು ಜರ್ಮನಿ, ಫ್ರಾನ್ಸ್, ಅಮೆರಿಕಾ, ಇಂಗ್ಲೆಂಡ್ ದೇಶಗಳ ಜನರನ್ನು ಆಕರ್ಷಿಸುತ್ತಿದೆ. ನಮ್ಮ ದೇಶದಲ್ಲೂ ಇಂದು ಜನರಿಗೆ ಯೋಗದ ಬಗ್ಗೆ ಕುತೂಹಲ, ಆಸಕ್ತಿ ಮೂಡುತ್ತಾ ಇರುವುದು ಕಂಡು ಬರುತ್ತಿದೆ. ಯೋಗಶಾಸ್ತ್ರವು ಇತ್ತೀಚಿನ ಬೆಳವಣಿಗೆಯಲ್ಲ. ಯೋಗಸಾಧನೆಯು ಪ್ರಾಚೀನ ಕಾಲದಲ್ಲಿಯೇ ಭಾರತೀಯರ ಜನಜೀವನದಲ್ಲಿ ಹಾಸುಹೊಕ್ಕಾಗಿತ್ತು. ಇದಕ್ಕೆ ನಿದರ್ಶನ; ವೇದ, ಪುರಾಣ, ಚಿತ್ರಲೇಖನ ಇವುಗಳಲ್ಲಿ ದೊರಕುತ್ತದೆ. ಕ್ರಿ. ಪೂ. 2000 ವರ್ಷಗಳಿಗಿಂತ ಹಿಂದಿನದೆನ್ನಲಾದ ಪದ್ಮಾಸನದ ಭಂಗಿಯಲ್ಲಿನ ಎರಡು ಚಿತ್ರಗಳು ಹರಪ್ಪಾ ಮೊಹೆಂಜೋದಾರೋವಿನ ಸಂಶೋಧನೆಯಲ್ಲಿ ದೊರೆತಿರುವುದಾಗಿ ಇತ್ತೀಚೆಗೆ ತಿಳಿದು ಬಂದಿದೆ.

ಭಾರತ ದೇಶವು ಯೋಗಿಗಳ ತವರು. ಯೋಗಶಾಸ್ತ್ರಕ್ಕೆ ಜನ್ಮಭೂಮಿ ಭಾರತ. ಇದು ಇತ್ತೀಚಿಗೆ ಬೆಳಕಿಗೆ ಬಂದುದಲ್ಲ. ನಮ್ಮ ಪ್ರಾಚೀನ ಋಷಿ ಮುನಿಗಳು ಸ್ವತಃ ಅಭ್ಯಸಿಸಿ, ಪ್ರಯೋಜನವನ್ನು ಪಡೆದು, ನಮಗೆ ಈ ಅಮೂಲ್ಯವಾದ ಕೊಡುಗೆಯನ್ನು ಬಿಟ್ಟುಹೋಗಿರುತ್ತಾರೆ. ಮೋಕ್ಷಪ್ರಾಪ್ತಿಗೆ, ಬ್ರಹ್ಮಸಾಕ್ಷಾತ್ಕಾರಕ್ಕೆ ಯೋಗಮಾರ್ಗವು ಸಾಧನವಾಗಿದೆ.

ಯೋಗ ಎಂದರೇನು ? ಯೋಗ ಎನ್ನುವ ಪದ ಸಂಸ್ಕೃತ ಮೂಲಧಾತುವಾದ "ಯುಜ್" ಎನ್ನುವುದರಿಂದ ಬಂದಿದೆ. ಇಲ್ಲಿ ಯೋಗವೆಂದರೆ ಕೂಡಿಸು, ಬಂಧಿಸು, ಐಕ್ಯವಾಗು, ನೊಗಕ್ಕೆ ಕಟ್ಟು, ಉಪಯೋಗಿಸು, ಆಸಕ್ತಿ ವಹಿಸು, ಚಿತ್ತವನ್ನು ನಿರ್ದೇಶಿಸಿ ಕೇಂದ್ರೀಕರಿಸು, ಎನ್ನುವ ಅರ್ಥಗಳು ಹೊರಡುತ್ತವೆ. ಸಂಯೋಜನೆ, ಸನ್ನಹನ, ಉಪಾಯ ಎನ್ನುವ ಅರ್ಥವೂ ಇದೆ. ಭಗವಂತನ ಇಚ್ಛೆಯೊಂದಿಗೆ ನಮ್ಮ ಇಚ್ಛೆಯ ನಿಜವಾದ ಸಂಸರ್ಗವೆಂದರೆ ಇದೇ. ಆತ್ಮನಲ್ಲಿ ಮನವನ್ನು ನಿಲ್ಲುವಂತೆ ಮಾಡುವ ಉಪಾಯ ಯೋಗ ಎಂದು ತಿಳಿಯಬೇಕು. ಯೋಗ ಎಂದರೆ ಸಂಬಂಧ, ಜ್ಞಾನ, ಯುಕ್ತಿ ಎಂಬ ಅರ್ಥಗಳೂ ಬರುತ್ತದೆ. ಆಧ್ಯಾತ್ಮಿಕ ಸಾಧನೆಯ ಕ್ಷೇತ್ರದಲ್ಲಿ, ಆತ್ಮ ಪರಮಾತ್ಮನಲ್ಲಿ ನೆಲಸುವುದೇ ಯೋಗ. ಜ್ಞಾನ ಮತ್ತು ಕರ್ಮಗಳ ಸಮನ್ವಯವೇ ಯೋಗ ಎಂದು ಹೇಳಿರುತ್ತಾರೆ. ಸಂಗ್ರಹವಾಗಿ ಹೇಳಬೇಕಾದಲ್ಲಿ, ಭೌತಿಕ ಮತ್ತು ಆಧ್ಯಾತ್ಮಿಕತೆಯ ಸಮನ್ವಯವನ್ನೂ ಸಹ ಯೋಗ ಎಂದು ಕರೆದಿರುತ್ತಾರೆ.

ಮಹದೇವ ದೇಸಾಯಿಯವರು "ಗಾಂಧೀಜಿಯವರ ದೃಷ್ಟಿಯಲ್ಲಿ ಗೀತೆ" ಎನ್ನುವ ಪುಸ್ತಕದ ಪ್ರಸ್ತಾವನೆಯಲ್ಲಿ, 'ಶರೀರದ, ಮನಸ್ಸಿನ, ಆತ್ಮದ ಸರ್ವ ಶಕ್ತಿಗಳನ್ನೂ ಭಗವಂತನೊಡನೆ ಸಂಯೋಜಿಸುವುದೇ ಯೋಗ. ಇದು ಚಿತ್ತ, ಮನಸ್ಸು, ಭಾವನೆಗಳು, ಇಚ್ಛೆ ಎನ್ನುವ ಯೋಗದ ಮೂಲ ಭಾವನೆಗಳನ್ನು ಶಿಸ್ತುಗೊಳಿಸುವುದು ಮತ್ತು ಜೀವನದ ಎಲ್ಲ ಅಂಶಗಳನ್ನೂ ಸಮದೃಷ್ಟಿಯಿಂದ ನೋಡಲು ಸಹಾಯಕವಾಗುವ ಆತ್ಮದ ಒಂದು ನಿಲುವು' ಎಂದು ಹೇಳುತ್ತಾರೆ.

ಯೋಗದ ವಿಷಯವಾಗಿ ಅನೇಕಮಂದಿ ದಾರ್ಶನಿಕರು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುತ್ತಾರೆ:—

ಕಠೋಪನಿಷತ್ತಿನಲ್ಲಿ ಯೋಗವನ್ನು ಈ ರೀತಿ ವರ್ಣಿಸಿರುತ್ತಾರೆ. "ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಂ" ಎಂದರೆ ಬಾಹ್ಯವಾದ ವಿಷಯಾಂತರದಲ್ಲಿ ಹೋಗಬೆ ಇಂದ್ರಿಯಗಳನ್ನು ಆಂತರಿಕವಾದ ಅಂತರಾತ್ಮನಲ್ಲಿ ನಿಲ್ಲಿಸುವ ಸಾಧನೆಯನ್ನೇ ಯೋಗವೆಂದು ಹೇಳುವುದು.

ಯೋಗ ತತ್ತ್ವೋಪನಿಷತ್ತಿನಲ್ಲಿ ಈ ರೀತಿ ಹೇಳಿರುತ್ತಾರೆ. "ಯೋಗಸ್ಸಮತಾವಸ್ಥಾ ಜೀವಾತ್ಮ ಪರಮಾತ್ಮನೋಃ" ಪರಮಾತ್ಮನಲ್ಲಿ ಜೀವಾತ್ಮನು ಸಮರಸಗೊಳ್ಳುವುದೇ ಯೋಗ.

ಶಾಂಡಿಲ್ಯೋಪನಿಷತ್ತು ಯೋಗವನ್ನು ಈ ರೀತಿ ವಿವರಿಸಿರುತ್ತದೆ. "ಜೀವಾತ್ಮ ಪರಮಾತ್ಮೈಕ್ಯಾವಸ್ಥಾ ಯೋಗಃ". ಜೀವಾತ್ಮ ಪರಮಾತ್ಮರ ಐಕ್ಯವೇ ಯೋಗ.

"ಆತ್ಮಾನಂ ಕ್ಷೇತ್ರಂ ಅಧಿಕೃತ್ಯ ಯೋಗಃ". ಮನಸ್ಸನ್ನು ವಿಷಯಗಳಿಂದ ಸೆಳೆದು ಆಧ್ಯಾತ್ಮದ ಕಡೆಗೆ ತಿರುಗಿಸುವುದೇ ಆಧ್ಯಾತ್ಮಯೋಗ. ಇದೇ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಆಧ್ಯಾತ್ಮಯೋಗ.

"ಜ್ಞಾನೇಂದ್ರಿಯಾಣಿ ಸರ್ವಾಣಿ ನಿಗ್ರಹ್ಯ ಮನಸಾ ಸಹ ಏಕತ್ರ ಭಾವನಾ ಏವ ಯೋಗಃ". ಬುದ್ಧಿ ವೃತ್ತಿಯೂ ಜ್ಞಾನೇಂದ್ರಿಯಗಳೂ ಕಾರ್ಯವನ್ನು ಉಪಸಂಹರಿಸಿಕೊಂಡು ತೈಲಧಾರೆಯಂತೆ ಏಕಾಕಾರವೃತ್ತಿ ಸ್ವರೂಪವಾಗುವುದಕ್ಕೆ ಯೋಗವೆಂದು ಹೆಸರು.

ದತ್ತಾತ್ರೇಯ ಸಂಹಿತೆಯಲ್ಲಿ ಯೋಗದ ವಿವರಣೆ ಈ ರೀತಿ ಇದೆ. "ಸರ್ವ ಚಿನ್ತಾ ಪರಿತ್ಯಾಗಾನ್ನಿಶ್ಚಿನ್ತಾ ಯೋಗ ಉಚ್ಯತೇ". ಎಲ್ಲ ಚಿಂತೆಗಳನ್ನೂ ಬಿಟ್ಟು, ನಿಶ್ಚಿಂತೆಯಿಂದ ಇರುವುದೇ ಯೋಗ.

ಅಮರಕೋಶವು ಯೋಗವನ್ನು "ಯೋಗಃ ಸನ್ನಹನೋಪಾಯಃ ಜ್ಞಾನ ಸಂಗತಿ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಯುಕ್ತಿಷು" ಎಂಬುದಾಗಿ ವಿವರಿಸುತ್ತದೆ ಯೋಗವೆಂದರೆ ಸನ್ನಹನ, ಉಪಾಯ, ಜ್ಞಾನ, ಸಂಗತಿ, ಮುಕ್ತಿ ಎಂದು ಇಲ್ಲಿ ಅರ್ಥವಾಗುತ್ತದೆ.

ಭಗವದ್ಗೀತೆಯಲ್ಲಿ ಯೋಗದ ಬಗ್ಗೆ ಈ ರೀತಿ ಹೇಳಿದೆ "ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ". ಸಿದ್ಧಿ ಅಸಿದ್ಧಿಗಳಲ್ಲಿ ಸಮರೂಪವಾಗಿರುವ ಚಿತ್ತ ಸಮಾಧಾನವೇ ಯೋಗ ಎಂದು ವಿವರಿಸಿದ್ದಾರೆ.

"ಯೋಗಃ ಕರ್ಮಸು ಕೌಶಲಮ್" ಯೋಗವೆಂಬುದು ಕರ್ಮದಲ್ಲಿ ಕುಶಲತೆಯನ್ನೂ ಸಾಮರಸ್ಯ ಮತ್ತು ತಾಳ್ಮೆಯನ್ನೂ ಸೂಚಿಸುವುದೆಂದು ವಿವರಿಸಲ್ಪಟ್ಟಿದೆ. ಎಂದರೆ ಬಂಧ ಸ್ವಭಾವವುಳ್ಳ ಕರ್ಮಗಳು ತಮ್ಮ ಸ್ವಭಾವವನ್ನು ಬಿಟ್ಟು ಬಿಡುವಂತೆ ಮಾಡುವ ಕೌಶಲವು ಯೋಗ.

"ದುಃಖ ಸಂಯೋಗ ವಿಯೋಗಂ ಯೋಗ ಸಂಜ್ಞಿತಮ್" ಮಹತ್ತಾದ ದುಃಖವುಂಟಾದರೂ ಚಲಿಸದೆ ಇರುವುದಕ್ಕೆ ಯೋಗವೆಂದು ಹೆಸರು.

ಯೋಗಸ್ತ್ರಾಕ್ಕೆ ಮೂಲಭೂತರು ಪತಂಜಲಿ ಮಹರ್ಷಿಗಳು. ಇವರು ಬರೆದಿರುವ ಯೋಗ ದರ್ಶನವು ಯೋಗಶಾಸ್ತ್ರಕ್ಕೆ ಮೂಲಗ್ರಂಥವಾಗಿದೆ.

ಪತಂಜಲಿ ಮಹರ್ಷಿಗಳು "ಯೋಗಃ ಸಮಾಧಿಃ" ಎಂದು ಹೇಳಿರುತ್ತಾರೆ. ಯೋಗವೆಂದರೆ ಸಮಾಧಿ ಎಂದು ಅರ್ಥ. ಸಮಾಧಿ ಎಂದರೆ ಚಿತ್ತದ ಏಕಾಗ್ರತೆ ಸಂಯೋಗವಲ್ಲ. ಇಲ್ಲಿ ಬೇರೆ ಯಾವ ಅರ್ಥವನ್ನು ಕಲ್ಪಿಸಿದರೂ ತಪ್ಪಾಗುತ್ತದೆ.

ಮುಂದುವರಿಯುತ್ತಾ "ಯೋಗಶ್ಚಿತ್ತ ವೃತ್ತಿ ನಿರೋಧಃ" ಎಂಬುದಾಗಿ ಹೇಳಿರುತ್ತಾರೆ. ಯೋಗವೆಂದರೆ ಚಿತ್ತವೃತ್ತಿಗಳ ನಿರೋಧ ಎಂದರ್ಥ. ವಿವರವಾಗಿ ಹೇಳುವುದಾದಲ್ಲಿ ಮನಸ್ಸು ಎಲ್ಲ ಇಂದ್ರಿಯ ವ್ಯಾಪಾರಕ್ಕೂ ಕಾರಣ. ಅಂಥ ಮನಸ್ಸನ್ನು ವಿಷಯಾಂತರದಲ್ಲಿ ಹೋಗದಂತೆ ತಡೆಗಟ್ಟಿ ಆತ್ಮಾಭಿಮುಖವಾಗಿ ಮಾಡುವ ಸಾಧನೆಯನ್ನೇ ಯೋಗ ಎನ್ನುವುದು.

ಪಾತಂಜಲದರ್ಶನದ ಮೂರನೆಯ ಅಧ್ಯಾಯದಲ್ಲಿ ಹೀಗೆ ಹೇಳಿರುತ್ತಾರೆ "ತ್ರಯಮೇಕತ್ರ ಸಂಯಮಃ" ಧಾರಣ, ಧ್ಯಾನ, ಸಮಾಧಿಗಳು ಕೂಡಿದ ಸಂಯಮವೇ ಯೋಗ.

ಇಲ್ಲಿಯವರೆಗೆ ಅನೇಕ ಮಂದಿ ದಾರ್ಶನಿಕರು ಯೋಗವನ್ನು ಕುರಿತು ಏನು ಹೇಳಿದ್ದಾರೆ ಎಂಬುದನ್ನು ಪರಿಶೀಲಿಸಿದೆವು. ಸಂಗ್ರಹವಾಗಿ ಹೇಳಬೇಕಾದರೆ ಯೋಗವು ಆತ್ಮ ಸಾಕ್ಷಾತ್ಕಾರದ ಮಾರ್ಗವಾಗಿದೆ. ಎಲ್ಲ ಪ್ರಾಪಂಚಕ ಗುರಿಯನ್ನು ಮುಟ್ಟುವುದಕ್ಕೂ ಸಾಧನೆಯು ಅತಿಮುಖ್ಯ. ಹಾಗೇ ಪಾರಮಾರ್ಥಿಕ ಸಾಕ್ಷಾತ್ಕಾರದ ಮಾರ್ಗದಲ್ಲಿ ಸಾಧನೆಯು ಅತಿ ಅವಶ್ಯಕ.

ಮಾನವನ ಜೀವನಕ್ಕೆ ಎರಡು ಮುಖಗಳುಂಟು. ಒಂದು ಪ್ರಾಪಂಚಿಕ, ಮತ್ತೊಂದು ಪಾರಮಾರ್ಥಿಕ. ಇವೆರಡರಲ್ಲಿ ಯಾವುದೊಂದು ಲೋಪವಾದರೂ ವ್ಯಕ್ತಿಯು ಜೀವನದಲ್ಲಿ ಪರಿಪೂರ್ಣತೆ ಪಡೆಯಲಾರ. ಎರಡೂ ಒಂದಕ್ಕೊಂದು ಪೂರಕವಾಗಿ, ಜೀವನದಲ್ಲಿ ಹಾಸು ಹೊಕ್ಕಾಗಿ, ಸಮರಸವಾಗಿದ್ದರೇ ಜೀವನದ ಸಾರ್ಥಕತೆ. ಆದ ಕಾರಣ ಮನಶ್ಶಾಂತಿಗೆ, ಆತ್ಮದ ಉನ್ನತಿಗೆ ಪಾರಮಾರ್ಥವು ದಾರಿ ದೀಪವಾಗಬೇಕು. ಸಾಧನೆಯ ಮಾರ್ಗದಲ್ಲಿ ಪ್ರತಿವ್ಯಕ್ತಿಯೂ ಪೂರ್ಣ ಶ್ರದ್ಧೆ, ವಿಶ್ವಾಸದಿಂದ, ಉತ್ಸುಕತೆಯಿಂದ ಮುನ್ನಡೆಯಬೇಕು. ಪೂರ್ವಜರಿಂದ ದೊರೆತಿರುವ ಈ ವಿದ್ಯೆ ನಮ್ಮಲ್ಲಿ ಉಳಿದು, ಬೆಳೆಯುವಂತಾಗಬೇಕು. ಇದರ ಪ್ರಯೋಜನವನ್ನು ಪ್ರತಿಯೊಬ್ಬ ಭಾರತೀಯನೂ ಅನುಭವಿಸುವಂತಾಗಬೇಕು.

———

(11 ನೇ ಪುಟದಿಂದ)

ಮಂಗಳಶ್ಲೋಕವಾದ 'ಅಖಿಲ ಭುವನ ಜನ್ಮಸ್ಥೇಯ' ಎಂಬುದರ ವಿವರಣೆಯೊಂದನ್ನೇ ಕೂಲಂಕಷವಾಗಿ ವಿಚಾರ ಮಾಡಿದರೂ ದೇಶಿಕರ ಅನ್ಯಾದೃಶವಾದ ಬುದ್ಧಿ ವೈಭವವೂ ಮೇಧಾಶಕ್ತಿಯೂ ವಿಶದವಾಗುವುವು. ಒಂದೊಂದು ಪಂಕ್ತಿಯೂ ಆಚಾರ್ಯರ ಪಾಂಡಿತ್ಯಮುದ್ರೆಯಿಂದಲೂ ಪ್ರತಿಭಾವೈಶಿಷ್ಟ್ಯದಿಂದಲೂ ಕೂಡಿವೆ.

ಈಶಾವಾಸ್ಯೋಪನಿಷದ್ಭಾಷ್ಯಮ್ :— ಭಗವದ್ರಾಮಾನುಜರ ವೇದಾರ್ಥ ಸಂಗ್ರಹ ಮತ್ತು ಶ್ರೀಭಾಷ್ಯಗಳಲ್ಲಿಯೇ ಉಪನಿಷದ್ಭಾಷ್ಯಗಳೂ ಅಂತರ್ಗತವೆಂಬುದು ಸುವಿಧಿತವಾದ ವಿಷಯ. ಅದರೂ ಈಶಾವಾಸ್ಯ ವಾಕ್ಯಗಳ ಅರ್ಥವು ಸುಸ್ಪಷ್ಟವಾಗಿಲ್ಲವೆಂದು ಆಶಯದಿಂದ ಆಚಾರ್ಯರು ತಮಗಭಿಮತವಾದ ರೀತಿಯಲ್ಲಿ ಉಪನಿಷದರ್ಥವನ್ನು ವಿಶದೀಕರಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಶ್ರೀಮನ್ನಾರಾಯಣನೇ ಪರಮ ಪುರುಷನೆಂದೂ ಅವನಿಂದಲೇ ಇಡೀ ವಿಶ್ವವು ವ್ಯಾಪ್ತವಾಗಿದೆಯೆಂದೂ ಶ್ರುತಿಗಳ ಆಧಾರದಿಂದ ಸ್ಥಾಪಿಸಿ, ಮುಮುಕ್ಷುವಾದವನು ವೈರಾಗ್ಯ ಭೂಷಿತವಾದ ವೃತ್ತಿಯನ್ನವಲಂಬಿಸಿ ಕರ್ಮಗಳನ್ನು ಮಾಡುತ್ತಲೇ ಇರಬೇಕೆಂದೂ, ಅಂತಹ ಕರ್ಮವೂ ಫಲಸಂಗತ್ಯಾಗಪೂರ್ವಕವಾಗಿದ್ದರೆ ಮಾತ್ರ ಲೇಪಕವಾಗುವುದಿಲ್ಲವೆಂದೂ ವಿವರಿಸಲಾಗಿದೆ. ಈ ಭಾಷ್ಯವನ್ನನುಸರಿಸಿಯೇ ನಾರಾಯಣಮುನಿಗಳಿಂದ ಬೇ-ರೊಂದು ವ್ಯಾಖ್ಯಾನವು ರಚಿತವಾಗಿದೆಯೆಂದು ತಿಳಿದು ಬಂದಿದೆ.

ತಾತ್ಪರ್ಯಚಂದ್ರಿಕೆ :— ಇದು ಶ್ರೀ ರಾಮಾನುಜರ 'ಗೀತಾಭಾಷ್ಯ'ದ ಉದ್ದಾಮ ವ್ಯಾಖ್ಯಾನ. ಇದು ವಿವರಣಾತ್ಮಕವಾಗಿಯೂ ವಿಮರ್ಶಾತ್ಮಕವಾಗಿಯೂ ಇದೆ. ಇದರಲ್ಲಿ 'ಗೀತಾಭಾಷ್ಯ'ದ ಒಂದೊಂದು ಪದ, ಪದ-ಪುಂಜ, ವಾಕ್ಯ, ರಚನೆ ಮತ್ತು ವಿಷಯಗಳ ಪ್ರಾಮುಖ್ಯವನ್ನೂ ಸ್ವಾರಸ್ಯವನ್ನೂ ವಿಶದಪಡಿಸಿದೆ. ಅಲ್ಲದೆ ಗೀತಾದರ್ಶನವನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಪ್ರತಿಪಾದಿಸಿದೆ. ಇಲ್ಲಿ ಶ್ರೀ ರಾಮಾನುಜರ ಪ್ರಪತ್ತಿ ತತ್ತ್ವವು ಬಹು ನಿಷ್ಕೃಷ್ಟವಾಗಿ ನಿರೂಪಿತವಾಗಿದೆ. ೩-೪-೫-೬ ನೆಯ ಅಧ್ಯಾಯಗಳ ಮತ್ತು ೧-೨ ಅಧ್ಯಾಯಗಳ ಏಕವೇಲಿಕಾತ್ವವು (ಸಾಮಂಜಸ್ಯ ಸಂಬಂಧ) ವಿಶದಪಡಿಸಲಾಗಿದೆ. ರಾಮಾನುಜರ ಸಾಮಾನ್ಯ ಶಬ್ದಗಳೂ ಇಲ್ಲಿ ಅರ್ಥ ಸ್ವಾರಸ್ಯಯುತವೂ ಗಾಂಭೀರ್ಯಪೂರ್ಣವೂ ಆಗಿ ಕಂಗೊಳಿಸುತ್ತವೆ. ದೇಶಿಕರ ಪ್ರಕಾರ ಮೂರು ಅಧ್ಯಾಯಷಟ್ಕಗಳೂ ಕ್ರಮವಾಗಿ ತತ್ತ್ವಜ್ಞಾನ, ಈಶ್ವರ ಮತ್ತು ಭಕ್ತಿ-ಇವುಗಳ ಶೋಧನೆಯೇ ಆಗಿವೆ. ಅಲ್ಲದೆ ಶರಣಾಗತಿ ಅಥವಾ ಪ್ರಪತ್ತಿಯೇ ಜೀವನದ ಪ್ರಧಾನ ತತ್ತ್ವವೆಂದು ಸಿದ್ಧಾಂತೀಕೃತವಾಗಿದೆ 'ತಾತ್ಪರ್ಯಚಂದ್ರಿಕೆ'ಯ ಚರಮ ಶ್ಲೋಕಭಾಗವು ಗೀತಾದರ್ಶನದ ಸಾರಸ್ಯವನ್ನೊಳಗೊಂಡಿದೆಯೆಂಬಂಶವು ಬಹು ಸ್ಪಷ್ಟವಾಗಿ ವಿಭಜನೆಯಿಂದ ಪ್ರತಿಪಾದಿತವಾಗಿದೆ. ವಾಸ್ತವವಾಗಿ ಅದೇ ಭಗವಂತನಲ್ಲಿ ಜೀವನಿಗಿರುವ ನಿಸ್ವಾರ್ಥವಾದ ಪ್ರೇಮ. ಇಲ್ಲಿ 'ಶತದೂಷಿಣಿ' ಸೇಶ್ವರಮೀಮಾಂಸಾ' ಶ್ಲೋಕಗಳ ಉಲ್ಲೇಖವಿದೆ.

ಗೀತಾರ್ಥಸಂಗ್ರಹರಕ್ಷಾ:— ಶ್ರೀಭಗವದ್ಗೀತೆಯು ಅನೇಕರಿಂದ ವ್ಯಾಖ್ಯಾತವಾಗಿದ್ದರೂ ಅದರ ಸಾರವತ್ತಾದ ಅರ್ಥ ಯಾರಿಗೂ ಸ್ಫುರಿಸಿಲ್ಲವೆಂದು ಭಗವಾನ್ ಯಾಮುನಾಚಾರ್ಯರು ಅದಕ್ಕೆ ಸಾಮಂಜಸ್ಯವಾಗಿ, ಸಾಂಪ್ರದಾಯಕವಾದ ಅರ್ಥವಿವರಣೆಯಾಗಬೇಕೆಂದು 'ಗೀತಾಥಸಂಗ್ರಹ' ವೆಂಬ ಅತಿ ಚಿಕ್ಕದಾದ ೩೭ ಶ್ಲೋಕಗಳ ಗ್ರಂಥವನ್ನು ರಚಿಸಿದರು. ಅದು ಗೂಢವೂ ಅತಿಸಂಕ್ಷಿಪ್ತವೂ, ಸಾಮಾನ್ಯಜನರಿಗೆ ದುರವಗಾಹವೂ ಆಗಿದ್ದುದರಿಂದ ಅವರ ಆಶಯವನ್ನು ಯಥಾವತ್ತಾಗಿ ವಿವರಣೆ ಮಾಡುವುದಕ್ಕಾಗಿ ಆಚಾರ್ಯರು ಈ ಗ್ರಂಥವನ್ನು ರಚಿಸಿದರು. ಇಲ್ಲಿ ಕರ್ಮಜ್ಞಾನ ಭಕ್ತಿಯೋಗಗಳ ನಿಷ್ಕೃಷ್ಟ ಸ್ವರೂಪವೂ ಅವುಗಳ ಪರಸ್ಪರ ಸಂಬಂಧವೂ, ಸಾರ್ಥಕ್ಯವೂ ವಿಶದವಾಗಿ ಉಪಪಾದಿತವಾಗಿದೆ. ದೇಶಿಕರು ಇಲ್ಲಿ ಗೀತೆಯ ೧೮ ಅಧ್ಯಾಯಗಳಿಗೆ ಪುನರ್ನಾಮಕರಣ ಮಾಡಿರುವುದು ಅದ್ಭುತವಾಗಿದೆ. ಅವು ಕ್ರಮವಾಗಿ ಮುಂದಿನ ರೀತಿಯಲ್ಲಿವೆ. ೧ ಶ್ರವಣಾಧಿಕಾರಿ ೨ ಶ್ರವಣಾಧಿಕಾರಿ ಮೋಹಶಮನಮ್, ೩ ಕರ್ಮ ಯೋಗ ಕರ್ತವ್ಯತ್ವಮ್, ೪ ತದವಾಂತರ ಭೇಧಃ ೫ ತದಂತರ್ಗತಜ್ಞಾನ ವಿಪಾಕಃ ೬ ಯೋಗಾಭ್ಯಾಸವಿಧಿಃ ೭ ಪ್ರತಿಬುದ್ಧಪ್ರಾಧಾನ್ಯಂ ೮ ತ್ರಿವಿಧಾಕಾರವೇದ್ಯೋಪಾಯ ವಿಭಾಗಃ ೯ ಸಪ್ರಕಾರಭಕ್ತಿಯೋಗಃ ೧೦ ಗುಣ ವಿಭೂತ್ಯಾನಂತ್ಯಮ್ ೧೧ ವೈಶ್ವರೂಪ ದರ್ಶನೋಪಾಯಃ ೧೨ ಭಕ್ತ್ಯಾರೋಹ ಕ್ರಮಃ ೧೩ ವಿಶುದ್ಧಕ್ಷೇತ್ರಜ್ಞವಿಜ್ಞಾನಮ್ ೧೪ ತ್ರೈಗುಣ್ಯವಿಶೋಧನಮ್ ೧೫ ಪುರುಷೋತ್ತಮವೈಲಕ್ಷಣ್ಯಂ ೧೬ ಶಾಸ್ತ್ರವಶ್ಯತ್ವಂ ೧೭ ಶಾಸ್ತ್ರೀಯವಿವೇಚನಮ್ ೧೮ ಸಾರೋದ್ಧಾರಃ. ಆಚಾರ್ಯರು ಉಪಯೋಗಿಸಿರುವ ರಕ್ಷಾಶಬ್ದಕ್ಕೆ ಅರ್ಥವು ಸ್ವಾರಸ್ಯವಾಗಿದೆ. ಅವರಿಗೆ ಯಾಮುನಾಚಾರ್ಯರ ಗ್ರಂಥದ ವ್ಯಾಖ್ಯಾನದೃಷ್ಟಿಯಲ್ಲಿ ಪ್ರಾಚೀನ ಸಂಪ್ರದಾಯ ಕ್ರಮಪರಿಪೋಷಣೆ ಅವರ ಧ್ಯೇಯವೆಂಬುದು ವಿಶದೀಕೃತವಾಗಿದೆ. 'ಗೀತಾರ್ಥಸಂಗ್ರಹರಕ್ಷೆ'ಯು ವಿಶಿಷ್ಟಾದ್ವೈತಿಗಳ ಪ್ರವೃತ್ತಿಶಾಸ್ತ್ರದ ಪ್ರತೀಕವೇ ಆಗಿದೆ. ಇಲ್ಲಿ 'ನಿಕ್ಷೇಪರಕ್ಷಾ' 'ತಾತ್ಪರ್ಯಚಂದ್ರಿಕೆ'ಗಳು ನಿರ್ದಿಷ್ಟವಾಗಿರುವುದರಿಂದ ಅವು ರಚಿತವಾದಮೇಲೆ ಇದು ರಚಿತವಾಗಿರಬೇಕು.

ಚತುಶ್ಶ್ಲೋಕೀಭಾಷ್ಯ:—ಇದು ಯಾಮುನರ 'ಚತುಶ್ಶ್ಲೋಕೀ'ಸ್ತೋತ್ರದ ವ್ಯಾಖ್ಯಾನ. ಭಾಷ್ಯದ ಪೀಠಿಕೆಯಲ್ಲಿ ಉಕ್ತವಾಗಿರುವ 'ಅತ್ರಸಮನ್ವಯಾವಿರೋಧಸಾಧನಫಲ ವಿಷಯ ಶಾರೀರಕ ಚತುರಧ್ಯಾಯೀ ಸಮಧಿಗತಸ್ಯ ಭಗವತಃ ಸರ್ವಪ್ರಕಾರಾಭಿಮತಾನುರೂಪ ಸಹಧರ್ಮಿಣೀ ವಿಶಿಷ್ಟತಯಾಪಿ ಸರ್ವಾಧಿಕತ್ವಂ 'ಕಃ ಶ್ರೀಃ ಶ್ರಿಯಃ' ಇತ್ಯುಕ್ತ ಕೈಮುತಿಕನ್ಯಾಯ ಕಾಕು ಗರ್ಭಯಾ ಚತುಃಶ್ಲೋಕ್ಯಾ ಪ್ರಕಾಶಯನ್ ಪ್ರಥಮಂ ಶ್ರಿಯಃ ಪ್ರತಿಪಿಪಾದಯಿಷಿತಾನಾಂ ವಿಭೂತಿದ್ವಯ ಶೇಷತ್ವಾದೀನಾಂ ಸ್ಥಾಪಕವಾದ' ಎಂಬ ಪೀಠಿಕಾವಚನಕ್ಕನುಸಾರವಾಗಿ ಶ್ರೀಲಕ್ಷ್ಮೀನಾರಾಯಣರ

ಸ್ವರೂಪ, ಪರಸ್ಪರಸಂಬಂಧಾದಿಗಳ ಸಮೀಕ್ಷೆಯು ವಿಸ್ತಾರವಾಗಿ ಮಾಡಲ್ಪಟ್ಟಿದೆ.

ಸ್ತೋತ್ರರತ್ನಭಾಷ್ಯ:— ಇದು ಯಾಮುನಾಚಾರ್ಯರ 'ಸ್ತೋತ್ರರತ್ನ'ಕ್ಕೆ ಹೃದಯಂಗಮವೂ ವಿಸ್ತಾರವೂ ಆದ ಭಾಷ್ಯವಾಗಿದೆ. ಆಚಾರ್ಯದ್ವಯರ ಭಕ್ತಿಯ ಪರಾಕಾಷ್ಠೆಯನ್ನು ಪ್ರಪತ್ತಿಯ ಭಾವಪಾರವಶ್ಯವನ್ನು ಪ್ರಕಾಶಗೊಳಿಸುತ್ತದೆ. ವಿಶಿಷ್ಟಾದ್ವೈತತತ್ತ್ವದ ಸಾರಸಂಗ್ರಹವಾಗಿದೆ, ತತ್ತ್ವವಿವರಣೆಯೂ ಆಗಿದೆ. ಪೀಠಿಕಾಭಾಗದಲ್ಲಿ ಗುರುಭಕ್ತಿಯ ಪ್ರಾಶಸ್ತ್ಯವನ್ನು

ಭಗವದ್ವಂದನಂ ಸ್ವಾದ್ಯಂ
ಗುರುವಂದನಪೂರ್ವಕಂ ।
ಕ್ಷೀರಂ ಶರ್ಕರಾಯುಕ್ತಂ
ಸ್ವದತೇ ಹ ವಿಶೇಷತಃ ॥

ಎಂಬ ಶ್ಲೋಕದಿಂದ ಪ್ರದರ್ಶಿಸಿದೆ.

ಸರ್ವಾರ್ಥಸಿದ್ಧಿ :— ತಮ್ಮ ಸ್ವತಂತ್ರ ಶಾಸ್ತ್ರಗ್ರಂಥವಾದ ತತ್ತ್ವಮುಕ್ತಾಕಲಾಪಕ್ಕೆ ಅವರದೇ ಆದ ವ್ಯಾಖ್ಯಾನ. ಈ ವ್ಯಾಖ್ಯಾನವನ್ನು ರಚಿಸಿದ ಉದ್ದೇಶವನ್ನು ದೇಶಿಕರೇ ಈ ರೀತಿ ಸ್ಪಷ್ಟಗೊಳಿಸಿದ್ದಾರೆ.

ತಾರಾಕಲ್ಪೇ ಸ್ಫುರತಿ ಸುಧಿಯಾಂ
ತತ್ತ್ವಮುಕ್ತಾಕಲಾಪೇ ।
ದೂರಾದ್ವೃತ್ತ್ಯಾ ದುರಧಿಗಮತಾಂ
ಪಶ್ಯತಾಂ ಸರ್ವಸಿದ್ಧ್ಯೈ ।
ನಾತಿ ವ್ಯಾಸಪ್ರತೀಕರವತೀ
ನಾತಿ ಸಂಕೋಚ ಖೇದಾ
ವೃತ್ತಿಸ್ಸೇಯಂ ವಿಶದ ರುಚಿರಾ
ಕಲ್ಪ್ಯತೇಽಸ್ಮಾಭಿರೇವ ॥

ಇವುಗಳಲ್ಲದೆ ಆಚಾರ್ಯರು ಶ್ರೀರಾಮಾನುಜರ ಗದ್ಯತ್ರಯಗಳಿಗೆ ಭಾಷ್ಯವನ್ನೂ ಯಾಮುನರ 'ಗೀತಾರ್ಥಸಂಗ್ರಹ'ಕ್ಕೆ 'ಗೀತಾರ್ಥಸಂಗ್ರಹಪತ್ತು' ಎಂಬ ತಮಿಳು ವ್ಯಾಖ್ಯಾನವನ್ನೂ ತಿರುಪ್ಪಾಣಿ ಆಳ್ವಾರರವರ 'ಅಮಲನಾದಿಪಿರ್ರಾ' ಎಂಬ ಪ್ರಬಂಧಕ್ಕೆ 'ಮುನಿವಾಹನಭೋಗ' ವೆಂಬ ಮಣಿಪ್ರವಾಳ ಶೈಲಿಯ ವ್ಯಾಖ್ಯಾನವನ್ನು ಪ್ರಾಕೃತವ್ಯಾಕರಣಕ್ಕೆ ಸಂಬಂಧಪಟ್ಟ ಹಾಗೆ ಭಾಮಹನ ವೃತ್ತಿಗೆ ವ್ಯಾಖ್ಯಾನವನ್ನು ರಚಿಸಿದ್ದಾರೆ.

ರಹಸ್ಯರಕ್ಷೆ:— ಶ್ರೀವೈಷ್ಣವ ಸಮಯಾಚಾರ ಪ್ರಸಿದ್ಧವಾದ ಪ್ರಪದನಸ್ವರೂಪ ಮಹಿಮೆ, ಅಂಶಗಳು, ಅನುಷ್ಠಾನಾವಶ್ಯಕತೆ ಮುಂತಾದ ವಿಷಯಗಳು ಇಲ್ಲಿ ವಿಶದೀಕೃತವಾಗಿವೆ. ಇದರ ಮೂರು ಅಧಿಕಾರಗಳಲ್ಲಿ ಕ್ರಮವಾಗಿ ಮೇಲೆ ತಿಳಿಸಿರುವ ಭಗವದ್ರಾಮಾನುಜರ ಗದ್ಯತ್ರಯ, ಯಾಮುನರ 'ಸ್ತೋತ್ರರತ್ನ', ಮತ್ತು 'ಚತುಶ್ಶ್ಲೋಕೀ' ಭಾಷ್ಯಗಳು ಅಂತರ್ಗತವಾಗಿವೆ. ಪ್ರಪದನಮೋಕ್ಷಸಾಧನತ್ವದಲ್ಲಿಯೂ ಶ್ರೀವಿಭುತ್ವದಲ್ಲಿಯೂ ವಿಪ್ರಪತಿನ್ನರಾದ ಕೆಲವರ ಆಕ್ಷೇಪಣೆಗೆ ಇಲ್ಲಿ ಸಮಾಧಾನವನ್ನು ಕೊಟ್ಟು ಸಿದ್ಧಾಂತಸಮರ್ಥನೆ ಮಾಡಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ ದೇಶಿಕರ ಉತ್ತಮವಾದ ಗದ್ಯಶೈಲಿ ವ್ಯಾಖ್ಯಾನಕ್ರಮ ಪೂರ್ವಪಕ್ಷವಾದಗಳ ವಿಷಯದಲ್ಲಿ ಗೌರವ, ವಿಶಿಷ್ಟಾದ್ವೈತಸಿದ್ಧಾಂತದ ವಿಚಾರದಲ್ಲಿ ಅಚಲವಾದ ಶ್ರದ್ಧೆ ಇವುಗಳಿಂದ ಕೂಡಿದ ಇವರ ವ್ಯಾಖ್ಯಾನಗ್ರಂಥಗಳು ಆಚಾರ್ಯರ ಪರಮಧ್ಯೇಯವಾದ ಸಿದ್ಧಾಂತ ಸ್ಥಿರೀಕರಣಕ್ಕೆ ವಿಶೇಷ ಪ್ರಯೋಜನಕರವಾಗಿದೆ.

★



# ಗೃಹಲಕ್ಷ್ಮಿ



## ಆದರ್ಶ ನಾರಿ ಸೀತೆ

ರಾಮಾಯಣ ತ್ರೇತಾಯುಗದ ಕಥೆ ಆದರೂ ಅವಿನಾಶಿ ಆದದ್ದು. ಜಗತ್ತು ಉಳಿಯುವವರೆಗೂ ಈ ಕಥೆಯು ಸಹ ಚಿರಸ್ಥಾಯಿ ಆಗಿ ನಿಲ್ಲಬಲ್ಲದು. ಸೀತಾರಾಮರ ಕಥೆಯೇ ಈ ರಾಮಾಯಣ. ಎಲ್ಲರ ಹೃದಯದಲ್ಲಿ ಸದಾ ನೆಲಸಿರತಕ್ಕಂತಹ ಉತ್ತಮ ಮೌಲ್ಯಗಳಿಂದ ಕೂಡಿದ ಕಥೆ ಇದಾಗಿದೆ. ಇದರ ಕಥಾನಾಯಕಿ ಸೀತೆ ಪುಟವಿಟ್ಟ ಚಿನ್ನ. ಸೀತೆಯೊಬ್ಬಳಿಲ್ಲದಿದ್ದರೆ ರಾಮಾಯಣವೇ ನಡೆಯುತ್ತಿರಲಿಲ್ಲ. ವೈದೇಹಿ, ಜಾನಕಿ, ಅಯೋನಿಜೆ, ಮೈಥಿಲಿ ಎಂದು ನಾನಾ ಹೆಸರುಗಳನ್ನು ಪಡೆದ ಸೀತೆ, ಸ್ತ್ರೀ ಸಮೂಹಕ್ಕೆ ಆದರ್ಶಪ್ರಾಯಳು.

ತನ್ನ ಒಳ್ಳೆಯ ಕೆಲಸಕಾರ್ಯಗಳಿಂದ, ನಡೆ-ನುಡಿಯಿಂದ ಇತರರ ಮೆಚ್ಚುಗೆಗೆ ಪಾತ್ರವಾಗಿ, ಇತರರೂ ಅದನ್ನು ಅನುಸರಿಸುವಂತೆ ಮಾಡುವ, ಅನುಕರಣೆಗೆ ಯೋಗ್ಯವಾದ ವಿಚಾರವೇ ಆದರ್ಶ. ಸುಸಂಸ್ಕೃತಳಾದ ಸೀತೆಯಲ್ಲಿ ಸ್ತ್ರೀಜಾತಿಯಲ್ಲಿ ಇರಬೇಕಾದ ಉತ್ತಮಗುಣಗಳೆಲ್ಲ ಇದ್ದವು.

"ಮಹಾಸಾಧ್ವಿ ಶಿರೋಮಣಿ ಆದ ಸೀತೆಯ ಭವ್ಯ ಚರಿತ್ರೆಯೇ ರಾಮಾಯಣ" ಎಂದಿದ್ದಾರೆ ಸ್ವಾಮಿ ವಿವೇಕಾನಂದ.

"ರಾಮಾಯಣಮಿದಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್" ಎಂದು ವಾಲ್ಮೀಕಿ ಮಹರ್ಷಿಗಳು ನುಡಿದಿದ್ದಾರೆ.

ಈ ಅಯೋನಿಜೆ, ಜನಕ ಮಹಾರಾಜನು ಯಜ್ಞಕಾರ್ಯಕ್ಕಾಗಿ ಭೂಮಿಯನ್ನು ಉಳುತ್ತಿದ್ದಾಗ ನೇಗಿಲಿಗೆ ಸಿಕ್ಕ ಶಿಶು, ಅದ್ದರಿಂದ ಸೀತೆ ಆದಳು.

ಸೀತೆಯ ಸ್ವಯಂವರಕ್ಕೆ ಗೊತ್ತು ಮಾಡಿದ ಪಣದಲ್ಲಿ ಶಿವಧನುಸ್ಸನ್ನು ಹೆದೆ ಏರಿಸುವ ಮೂಲಕ, ಗೆದ್ದು, ಇಕ್ಷ್ವಾಕು ವಂಶದ ರಘುಕುಲ ತಿಲಕ ಶ್ರೀರಾಮಚಂದ್ರನು ಸೀತೆಯ ಪಾಣಿಗ್ರಹಣ ಮಾಡುತ್ತಾನೆ.

ಸೀತಾರಾಮರದು ಅನುರಾಗ ದಾಂಪತ್ಯ, ಸರಸದಾಂಪತ್ಯ. ತನ್ನ ಕೈಯಲ್ಲಿದ್ದ ಉಂಗುರವನ್ನು ಕೆಳಗೆಸೆದು ಕಳೆದವನಂತೆ ನಟಿಸಿದ ಶ್ರೀರಾಮ. ಅದನ್ನು ಹುಡುಕಾಡುವುದರಲ್ಲಿ ಸೋತಳು ಸೀತೆ. ಸೀತೆಯದು ಹಂಸನಡಿಗೆಯೆಂದು ಶ್ರೀರಾಮಚಂದ್ರ ಭಾವಿಸಿದರೆ, ರಾಮನು ಸೀತೆಗೆ ಗಂಡಾನೆಯಂತೆ ಶ್ರೇಷ್ಠಾಂಗ ಉಳ್ಳವನು.

ಅತ್ತೆ ಮಾವಂದಿರಲ್ಲಿ ವಿಧೇಯಳಾಗಿ ನಡೆದುಕೊಳ್ಳುವ, ಪತಿಯೇ ತನ್ನ ಸರ್ವಸ್ವ ಎಂದು ತಿಳಿದು, ಅವನನ್ನು ನಾಥ (ಎಂದರೆ ನನ್ನೊಡೆಯ, ಪ್ರಭು) ಎಂದು ಸಂಬೋಧಿಸಿ ನಸುಕಿನಲ್ಲಿ ಎದ್ದು ಅವನಿಗಾಗಿ ಮಂಗಳಾಶಾಸನಗಳನ್ನು ಹಾಡುವ ಸದ್ಗೃಹಿಣಿ ಸೀತೆ. ಅವನ ದೇವತಾಕಾರ್ಯಕ್ಕೆ ಸಿದ್ಧಮಾಡುವವಳಾಗುತ್ತಾಳೆ ಸೀತೆ. ರಾಮನಿಗೆ ಪಟ್ಟಾಭಿಷೇಕವೆಂದಾಗ 'ಏಕೆ ಮಾವನವರು ಆರೋಗ್ಯ ತಾನೆ' ಎನ್ನುವ ಪ್ರಶ್ನೆ ಅವಳದು. ಪಂಚವಟಿಯಲ್ಲಿ ಮಾಯಾವಿ ರಾವಣನು ಬ್ರಾಹ್ಮಣ ಭಿಕ್ಷುಕನಾಗಿ ಬಂದಾಗ, ತನ್ನ ನೋವಿನಲ್ಲೂ ಸಹ, ಬಾಗಿಲಿಗೆ ಬಂದ ಬ್ರಾಹ್ಮಣನಿಗೆ ಆದರಾತಿಥ್ಯಗಳಿಂದ ಉಪಚರಿಸಬೇಕಾದದ್ದು ಗೃಹಿಣಿಯ ಧರ್ಮ ಎಂದು ನಂಬಿ ಅವನನ್ನು ಉಪಚರಿಸಲು ಮುಂದಾಗುತ್ತಾಳೆ. ಸತಿಗೆ ಪತಿಯೇ ಇಹಪರಗಳೆರಡರ ದೈವವೆಂದು ನಂಬಿದ್ದ ಸೀತೆ, ಅರಮನೆಯ ರಾಜವೈಭವ, ಭೋಗಭಾಗ್ಯಗಳೆಲ್ಲಾ ತೃಣಕ್ಕೆ ಸಮಾನವೆಂದು ಭಾವಿಸುತ್ತಾಳೆ. ವನವಾಸಕ್ಕೆ ಪತಿಯೊಂದಿಗೆ ಹೊರಟುಬಿಡುತ್ತಾಳೆ. ಸದಾ ರಾಮಧ್ಯಾನದಲ್ಲೇ ಇರುತ್ತಿದ್ದ ಸೀತೆ, ಭೃಂಗಕೀಟನ್ಯಾಯದಂತೆ ತಾನೂ ಸೀತೆಗೆ ಬದಲು ಎಲ್ಲಿ ರಾಮನಾಗಿ ಬಿಡುತ್ತೇನೋ ಎಂಬ ಭಾವನೆಯನ್ನು ತ್ರಿಜಟೆಯೊಂದಿಗೆ ವ್ಯಕ್ತಪಡಿಸುತ್ತಾಳೆ. ಸೂರ್ಯನನ್ನು ಪ್ರಭೆಯು ಅನುಸರಿಸುವಂತೆ ಸೀತೆ ರಾಮನಿಗೆ ಆಗಿದ್ದಳು, ಆರ್ಯಸ್ತ್ರೀಯರು ಪತಿಯನ್ನು ನೆರಳಿನಂತೆ ಸದಾಕಾಲವು, ಸುಖ-ದುಃಖಗಳೆರಡರಲ್ಲೂ ಅನುಸರಿಸಿ ನಡೆಯುವುದೇ ತಮ್ಮ ಧರ್ಮ ಎಂದು ಭಾವಿಸುತ್ತಾರೆ.

ರಾಮನಿಗೆ ಪಟ್ಟಾಭಿಷೇಕವೆಂದಾಗ ಸಂತೋಷದಿಂದ ಸೀತೆ ಮೈಮರೆಯಲಿಲ್ಲ. ರಾಜ್ಯಾಭಿಷೇಕಕ್ಕೆ ಬದಲು ವನವಾಸ ಎಂದಾಗ ಆಶಾಭಂಗವಾಯಿತೆಂದು ನೋವಿನ ನಿಟ್ಟುಸಿರು ಬಿಡಲಿಲ್ಲ. ಇದಕ್ಕೆಲ್ಲಾ ಕಾರಣಳಾದ ಕೈಕೇಯಿಯ ಮೇಲೆ ಕೋಪಗೊಳ್ಳಲಿಲ್ಲ. ಪ್ರತೀಕಾರದ ಬುದ್ಧಿ ಇಲ್ಲದ ಸೀತೆ ಸ್ಥಿತಪ್ರಜ್ಞಳಾಗಿದ್ದಳು. ಸುಖ-ದುಃಖಗಳೆರಡನ್ನೂ ಸಮಭಾವನೆಯಿಂದ ಕಾಣುವುದೇ ಸ್ಥಿತಪ್ರಜ್ಞರ ಲಕ್ಷಣ.

ಸೀತೆ ತನ್ನ ಪತಿಯ ಹೊರತು ಇತರ ಪುರುಷರನ್ನು ಸ್ಪರ್ಶಿಸುವುದೂ ಮಹಾಪಾಪ ಎಂದು ತಿಳಿದಿದ್ದಳು. ಹೆಣ್ಣಿಗೆ ಶೀಲವೇ ಸರ್ವಸ್ವ. ಪವಿತ್ರಳೂ, ಪರಿಶುದ್ಧಾತ್ಮಳೂ, ಮಹಾಸಾಧ್ವಿಯೂ ಆದ ಸೀತೆ 'ಅಶೋಕವನದಿಂದ ತನ್ನ ಹೆಗಲ ಮೇಲೆ ಕುಳಿತರೆ ರಾಮನ ಬಳಿ ಕರೆದೊಯ್ಯುವುದಾಗಿ' ಆಂಜನೇಯನು ಹೇಳಿದಾಗ ರಾಮನ ಹೊರತು ಅನ್ಯರನ್ನು ನಾನು ಸ್ಪರ್ಶಿಸುವುದಿಲ್ಲವೆನ್ನುತ್ತಾಳೆ. ರಾವಣನು ಅವಳನ್ನು ಎತ್ತಿಕೊಂಡು ಹೋದಾಗ ಅವಳು ನಿಂತ ನೆಲದೊಂದಿಗೇ ಕರೆದು ಕೊಂಡು ಹೋದ, ಅವನೂ ಅವಳನ್ನು ಸ್ಪರ್ಶಿಸಿಲ್ಲ ಎಂಬ ವಾದವಿದೆ. ರಾವಣ ಅವಳನ್ನು ಒಲಿಸಲು ಸಾಕಷ್ಟು ಪ್ರಯತ್ನಿಸಿದ. ಬೇಕಾದ ಆಸೆ ಆಮಿಷಗಳನ್ನೊಡ್ಡಿದ.

ಕುಬೇರನ ಅಷ್ಟೈಶ್ವರ್ಯ ಅವಳದೆಂದ, ಹೆದರಿಸಿದ, ಬೆದರಿಸಿದ. ಆದರೆ ಸೀತೆ ಇದ್ಯಾವುದಕ್ಕೂ ಅಂಜದೆ, ರಾವಣನು ಅತಿಕ್ರಮಿಸಿದರೆ ತಾನು ಆತ್ಮಹತ್ಯೆಮಾಡಿಕೊಳ್ಳುವುದಾಗಿ ಹೇಳುತ್ತಾಳೆ. ನೇರವಾಗಿ ಅವನ ಮುಖ ನೋಡಿ ಮಾತಾಡಲೂ ಸಹ ಇಚ್ಛೆ ಇಲ್ಲದ ಸೀತ ಹುಲ್ಲುಕಡ್ಡಿಯೊಂದನ್ನು ಮುಂದಿಟ್ಟು ಸಂಭಾಷಣೆ ನೆರವೇರಿಸುತ್ತಾಳೆ, ಲಂಕಾಧೀಶ್ವರ, ಮಹಾಮಾಯಾವಿ, ಮಹಾಬಲಿಷ್ಠ ಅಮಿತ ತೇಜಸ್ವಿ, ಅತುಲ ಪರಾಕ್ರಮಿ ಆಗಿದ್ದ ರಾವಣೇಶ್ವರನನ್ನು ಸೀತೆ, 'ನೀನು ಈ ತೃಣಕ್ಕಿಂತಲೂ ಕೀಳು ಎನಗೆ' ಎಂಬ ಭಾವನೆಯಿಂದ ಕಂಡಳೆಂಬುದು ಇಲ್ಲಿ ವ್ಯಕ್ತವಾಗುತ್ತೆ.

ರಾವಣನು ತನ್ನನ್ನು ಎತ್ತಿಕೊಂಡು ಹೋಗುವ ಮಾರ್ಗ ಮಧ್ಯದಲ್ಲಿ ವಾನರರನ್ನು ಕಂಡ ಸೀತೆ ಒಂದು ಕ್ಷಣ ಯೋಚಿಸುತ್ತಾಳೆ. ನಂತರ ತನ್ನ ಮೈಮೇಲಿದ್ದ ಒಡವೆಗಳನ್ನು ಸೆರಗನ್ನು ಹರಿದು, ಅದರಲ್ಲಿ ಕಟ್ಟಿ ಕೆಳಕ್ಕೆ ಬೀಳಿಸುತ್ತಾಳೆ ಇದು ಅವಳ ಸಮಯಸ್ಫೂರ್ತಿಯನ್ನು ತಿಳಿಸುತ್ತೆ.

ಹೀಗೆ ಎಲ್ಲ ವಿಧದಲ್ಲೂ ಅತಿ ಉತ್ತಮಳೂ ಅನುಪಮೆಯೂ ಆಗಿದ್ದ ಸೀತೆಯಲ್ಲೂ ಸಹ ಮಾನವ ಸಹಜ ಗುಣಗಳಿದ್ದವು. ಅರಣ್ಯದಲ್ಲಿ ಅತಿಸುಂದರವಾಗಿ ಕಂಡ ನಯನಮನೋಹರವಾದ ಬಂಗಾರದ ಜಿಂಕೆಯನ್ನು ಕಂಡಾಗ, ಅದು ತನಗೆ ಬೇಕೇ ಬೇಕೆಂದು ಗಂಡನೊಡನೆ ತನ್ನ ಆಸೆಯನ್ನು ವ್ಯಕ್ತಪಡಿಸುವಳು. ರಾಕ್ಷಸನಮಾಯೆ ಆಗಿದ್ದ ಆ ಮೋಸದ ಜಿಂಕೆ ರಾಮನ ಬಾಣಕ್ಕೆ ಬಲಿಯಾಗಿ ತನ್ನ



ಅಸು ನೀಗುವಾಗ 'ಹಾ ಲಕ್ಷ್ಮಣ, ಹಾ ಸೀತೆ' ಎಂದು ರಾಮನ ಕೊರಲಿನಂತೆ ಕೂಗಿದಾಗ ಹೆದರಿದ ಸೀತೆ, ಲಕ್ಷ್ಮಣನನ್ನು ಅವನ ಅಣ್ಣನ ಸಹಾಯಕ್ಕೆ ಹೋಗುವಂತೆ ಒತ್ತಾಯಿಸಿದಳು. ಒಂಟಿಯಾದ ಹೆಂಗಸನ್ನು ಕಾನನದಲ್ಲಿ ಬಿಟ್ಟು ಹೋಗುವುದು ಸರಿಯಾದದ್ದಲ್ಲ ಎಂದು ಲಕ್ಷ್ಮಣನ ಭಾವನೆ. ಅದನ್ನು ಅಪಾರ್ಥ ಮಾಡಿಕೊಂಡ ಸೀತೆ ಮೈದುನನನ್ನು ತುಚ್ಛವಾಗಿ ನಿಂದಿಸಿದಳು. ಮಾತನ್ನು ಕೇಳಿದ ಮೇಲೆ ಲಕ್ಷ್ಮಣನು ಅಲ್ಲಿ ಒಂದು ನಿಮಿಷವೂ ನಿಲ್ಲಲಾಗದೆ ಅವಳನ್ನು ಒಂಟಿಯಾಗಿ ಬಿಟ್ಟು ಹೋಗಲೇಬೇಕಾಯ್ತು.

ಸಾಮಾನ್ಯಸ್ತ್ರೀಯಂತೆ ಆ ಜಿಂಕೆಗೆ ಆಸೆಪಟ್ಟಿದ್ದರಿಂದಲೇ ರಾವಣನ ಕೈಯಿಂದ ಅಪಹೃತಳಾಗಿ ರಾಮರಾವಣರ ಯುದ್ಧಕ್ಕೆ ಕಾರಣವಾದದ್ದು.

ಅರಣ್ಯವಾಸಕ್ಕೆ ತನ್ನನ್ನು ಕರೆದುಕೊಂಡು ಹೋಗಲು ಇಚ್ಛಿಸದ ರಾಮನಲ್ಲಿ ಸೆರಗೊಡ್ಡಿ ಬೇಡುತ್ತಾಳೆ, ಅನುನಯದಿಂದ ಪ್ರಾರ್ಥಿಸುತ್ತಾಳೆ. ತಾನು ಪತಿಯನ್ನು ಕ್ಷಣಕಾಲವು ಬಿಟ್ಟಿರಲಾರೆನೆಂದು ತನ್ನನ್ನು ಜೊತೆಯಲ್ಲೇ ಕರೆದು ಕೊಂಡು ಹೋಗಬೇಕೆಂದು, ಇಲ್ಲದಿದ್ದರೆ ನೇಣುಹಾಕಿಕೊಂಡು ಸಾಯುವುದಾಗಿಯೂ, ಪತಿ ಇಲ್ಲದ ಜಾಗದಲ್ಲಿ ಸತಿಗೆ ಯಾವ ಸುಖಸಂತೋಷಗಳೂ ಇರದೆಂದು, ಕಾಡಿ, ಬೇಡಿ, ಅವನನ್ನು ಜರಿದು, ಅಣಕಿಸಿ, ಪ್ರಾರ್ಥನೆ ಮಾಡಿ ಕಡೆಗೂ ತನ್ನ ಹಠವನ್ನೇ ಗೆಲ್ಲುತ್ತಾಳೆ.

ಇಡೀ ರಾಮಾಯಣಕ್ಕೆ ಕಾರಣಪುರುಷಳಾಗಿ, ಅದರ ಕಥಾನಾಯಕಿ ಆಗಿ, ಒಳ್ಳೆಯ ಹೆಣ್ಣಿನಲ್ಲಿ ಇರಬೇಕಾದ ಮಾನವ ಸಹಜವಾದ ಎಲ್ಲ ಗುಣಗಳನ್ನು ಹೊಂದಿದವಳಾಗಿ, ಎಂತಹ ಕಷ್ಟಕಾಲದಲ್ಲೂ ಪತಿಯನ್ನು ದೂಷಿಸಲು ಹೋಗದೆ, ವಿಧಿಯ ಕೈವಾಡದ ಬೊಂಬೆಗಳು ನಾವು ಎಂದು ತಿಳಿದವಳಾಗಿ, ಶೀಲಪ್ರಧಾನವೆಂದು ನಂಬಿ ಸ್ಥಿತಪ್ರಜ್ಞಳು, ಪ್ರಾಜ್ಞಳು, ಮಹಾಸಾಧ್ವಿಯೂ, ಪತಿವ್ರತಾಶಿರೋಮಣಿಯೂ, ಪವಿತ್ರಳೂ, ಪರಿಶುದ್ಧಹೃದಯದವಳು ಆದ ಸೀತೆ ಆದರ್ಶ ನಾರಿ ಎನ್ನುವುದರಲ್ಲಿ ಸಂಶಯವಿಲ್ಲ.

**ಶ್ರೀಮತಿ ಎ. ಪಂಕಜ**

# ಕಿಶೋರ ಜಗತ್



## ಧರ್ಮಿಷ್ಠರ ಒಂದು ಕಥೆ

**ಟಿ. ವಿ. ಭುವನೇಶ್ವರೀಸುಂದರೇಶನ್**

ಪೂರ್ವಕಾಲದಲ್ಲಿ ಖಾಂಡಿಕ್ಯ ಮತ್ತು ಕೇಶಿರಾಜ (ಕೇಶಿಧ್ವಜ) ಎಂಬ ಈರ್ವರು ಸಹೋದರರಿದ್ದರು. ಅವರಿಬ್ಬರೂ ವೀರರಾಗಿದ್ದರು. ಧರ್ಮಜ್ಞಾನದಲ್ಲಿ ಸಮಾನ ಪರಿಣತಿಯನ್ನು ಹೊಂದಿದ್ದರು.

ಒಮ್ಮೆ ಅವರೀರ್ವರ ಮಧ್ಯೆ ವೈಷಮ್ಯದಿಂದ ಘೋರಯುದ್ಧ ನಡೆಯಿತು. ಯುದ್ಧದಲ್ಲಿ ಕೇಶಿಧ್ವಜನು ವಿಜಯಿಯಾದನು. ಖಾಂಡಿಕ್ಯನು ರಾಜ್ಯಚ್ಯುತನಾಗಿ ತನ್ನ ಮಂತ್ರಿ ಬಂಧುವರ್ಗದ ಸಹಿತ ಕಾಡಿಗೆ ಹೊರಟು ಹೋದನು.

ಕೆಲವು ಕಾಲಾನಂತರ ಕೇಶಿಧ್ವಜನು ಪಾಪವಿಮುಕ್ತಿಗೆಂದು ಯಜ್ಞಗಳನ್ನು ಆಚರಿಸಲು ಮೊದಲಿಟ್ಟನು. ಒಂದು ದಿನ ಆತ ಯಜ್ಞಸಿದ್ಧತೆಗೆ ಅನುಗೊಳಿಸುತ್ತಲಿರುವಾಗ ಅವನು ಸಿದ್ಧಗೊಳಿಸಿದ ಹಸುವೊಂದನ್ನು ಅರಣ್ಯದಲ್ಲಿ ಹುಲಿಯು ಕೊಂದು ಹಾಕಿತು. ಇದರಿಂದ ಬಹಳವಾಗಿ ನೊಂದ ಕೇಶಿಧ್ವಜನು ಭೃಗು ಮಹರ್ಷಿಗಳೇ ಮುಂತಾದ ಇತರ ಮಹರ್ಷಿಗಳನ್ನು 'ತನ್ನ ಈ ಅಲಕ್ಷ್ಯದಿಂದ ಹಸುವಿನ ಮರಣ ಸಂಭವಿಸಿತು, ಇದಕ್ಕೆ ಪ್ರಾಯಶ್ಚಿತ್ತವೇನೆ'ಂದು ಕೇಳಿದನು. ಆದರೆ ಆ ಋಷಿಗಳಲ್ಲಿ ಯಾರಿಗೂ ಆ ಪಾಪಕ್ಕೆ ಪ್ರಾಯಶ್ಚಿತ್ತ ಏನೆಂಬುದು ತಿಳಿದಿರಲಿಲ್ಲ. ಅವರಲ್ಲಿ ಒಬ್ಬ ಋಷಿ ಹೀಗೆ ನುಡಿದ "ಪಾಪ ಪ್ರಾಯಶ್ಚಿತ್ತ ವಿಧಿ ವಿಧಾನಗಳನ್ನು ತಿಳಿದಿರುವಾತ ಖಾಂಡಿಕ್ಯ ಒಬ್ಬನೆ. ನೀನು ಅವನನ್ನೇ ಕೇಳಿ ಪಾಪವನ್ನು ಪರಿಹರಿಸಿಕೋ."

ಅವರ ಮಾತಿನಂತೆ ಕೇಶಿಧ್ವಜನು ಜ್ಞಾನಾರ್ಜನೆಗೆಂದು ಖಾಂಡಿಕ್ಯನ ಬಳಿಗೆ ಬಂದನು. ಸಕಲ ಬಲ ಸಮೇತನಾಗಿ ಖಾಂಡಿಕ್ಯನ ಆಶ್ರಮದ ಬಳಿಗೆ ಬಂದ ಕೇಶಿಧ್ವಜನು ತನ್ನ ಬಲವನ್ನು ದೂರದಲ್ಲಿ ನಿಲ್ಲಿಸಿ, ತಾನೋರ್ವನೇ ವಿನೀತನಾಗಿ ಸಹೋದರನ ಬಳಿಗೆ ಬಂದನು. ಸಕಲಬಲ ಸಮೇತನಾಗಿ ಬಂದ ರಾಜನನ್ನು ಕಂಡು ಖಾಂಡಿಕ್ಯನ ಮಂತ್ರಿ ಬಂಧುವರ್ಗದವರು ಹೆದರಿದರು. ಇತ್ತ ಕೇಶಿಧ್ವಜನ ಕಡೆಯವರು ಆತನಿಗೆ ಹೀಗೆ ಹೇಳಿದರು "ಆತನನ್ನು ನೀನು ರಾಜ್ಯಚ್ಯುತನನ್ನಾಗಿಸಿರುವೆ. ಇದರಿಂದ ನಿನ್ನ ಮೇಲಿನ ಕೋಪದಿಂದ ಆತನು ನಿನಗೆ ಅಪಾಯವನ್ನು ಉಂಟುಮಾಡಬಹುದು. ಆದ್ದರಿಂದ ಓರ್ವನೇ ಹೋಗುವುದು ಅಪಾಯ." ಅದಕ್ಕೆ ಕೇಶಿಧ್ವಜನು ಹೀಗೆ ಉತ್ತರಿಸಿದನು "ಅಯ್ಯಾ ಬಂಧು ವರ್ಗವೇ, ಖಾಂಡಿಕ್ಯನ ಬಳಿಗೆ ಧಾರ್ಮಿಕ ಸಮಸ್ಯೆಯ ಪರಿಹಾರಕ್ಕೋಸ್ಕರವಾಗಿ ಹೋಗುತ್ತಿದ್ದೇನೆ. ಆದರೆ ಆವೇಶದಲ್ಲಿ ನನ್ನ ಸಹೋದರ ನನ್ನನ್ನು ಕೊಂದಲ್ಲಿ ನನಗೆ ಯಜ್ಞದ ಫಲದೊರಕುತ್ತದೆ. ಪ್ರಾಯಶ್ಚಿತ್ತ ವಿಧಿವಿಧಾನವನ್ನು ಅವನು ತಿಳಿಸಿಕೊಟ್ಟಲ್ಲಿ ನನ್ನ ಯಜ್ಞ ನಿರ್ವಿಘ್ನವಾಗಿ ನೆರವೇರುತ್ತದೆ". ಹೀಗೆ ನುಡಿದು ಕೃಷ್ಣಾಜಿನವನ್ನು ಹೊದೆದು ಖಾಂಡಿಕ್ಯನ ಬಳಿಗೆ ಹೊರಟನು. ರಥಾರೂಢನಾಗಿ ಓರ್ವನೇ ಬರುತ್ತಿದ್ದ ಅವನನ್ನು ನೋಡಿ ಕೋಪದ ಆವೇಗದಲ್ಲಿ ಕಣ್ಣು ಕೆಂಪಾಗಿಸಿ ಖಾಂಡಿಕ್ಯನು ಗರ್ಜಿಸಿದನು. "ಮೂರ್ಖಾ, ನನ್ನನ್ನು ಕೊಲ್ಲಲು ಹೀಗೆ ಕೃಷ್ಣಾಜಿನವನ್ನು ಹೊದೆದು ಬರಬೇಕೆ? ನನಗೆ ಅರಿಯದೆಂದುಕೊಂಡೆಯಾ?" ಎಂದು ತಾನು ಅವನೊಡನೆ ಯುದ್ಧಕ್ಕೆ ಸನ್ನದ್ಧನಾದನು. ಆಗ ಕೇಶಿಧ್ವಜನು ವಿನೀತವಾಗಿ ತಲೆಬಾಗಿ "ಖಾಂಡಿಕ್ಯನೇ ನಾನು ಒಂದು ಧರ್ಮ ಶಂಕೆಯನ್ನು ನಿನ್ನಿಂದ ಪರಿಹರಿಸಿಕೊಳ್ಳಲೋಸುಗ ಬಂದಿದ್ದೇನೆ. ನಿನ್ನನ್ನು ಕೊಲ್ಲಲಿಕ್ಕೆಂದು ಬಂದಿಲ್ಲ. ಇದನ್ನು ವಿಮರ್ಶಿಸಿ ನೀನು ನನ್ನ ಮೇಲೆ ಕೋಪಗೊಳ್ಳಬಹುದು" ಎಂದು ನುಡಿದನು.

ಖಾಂಡಿಕ್ಯನು ತನ್ನ ಮಂತ್ರಿಗಳ ಸಲಹೆಯನ್ನು ಕೇಳಿದಾಗ ಅವರು ಕೇಶಿಧ್ವಜನನ್ನು ಕೊಲ್ಲಲು ಸಲಹೆ ನೀಡಿದರು. ಆದರೆ ಧರ್ಮಿಷ್ಠನಾದ ಖಾಂಡಿಕ್ಯನು ಅದನ್ನು ಅಂಗೀಕರಿಸದೆ ಕೇಶಿಧ್ವಜನ ಸಂಶಯಗಳಿಗೆ ತಕ್ಕ ಪರಿಹಾರವನ್ನು ಹೇಳಿದನು. ಅನಂತರ ಕೇಶಿಧ್ವ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಜನು ತನ್ನ ಊರಿಗೆ ಮರಳಿ ತನ್ನ ಯಜ್ಞ ಯಾಗಾದಿಗಳನ್ನು ನಿರ್ವಿಘ್ನವಾಗಿ ನೆರವೇರಿಸಿದನು.

ಯಾಗಕಾರ್ಯ ಮುಗಿದ ನಂತರ ಋತ್ವಿಜರೆಲ್ಲರನ್ನು ಸನ್ಮಾನಿಸಿದ ಕೇಶಿಧ್ವಜನಿಗೆ ಖಾಂಡಿಕ್ಯನಿಗೂ ಗುರುದಕ್ಷಿಣೆಯನ್ನು ಸಲ್ಲಿಸ ಬೇಕೆಂಬ ಮನಸ್ಸಾಯಿತು. ಅದರಂತೆ ಕಾಣಿಕೆಗಳ ಸಮೇತನಾಗಿ ಚತುರಂಗಬಲ ಸಮೇತನಾಗಿ ಆಶ್ರಮಕ್ಕೆ ಬಂದನು. ಬಲಸಮೇತನಾಗಿ ಬಂದ ಕೇಶಿಧ್ವಜನ ಪುನರಾಗಮನವನ್ನು ಕಂಡು ಖಾಂಡಿಕ್ಯನ ಮನದಲ್ಲಿ ಸಂಶಯ ಉತ್ಪನ್ನವಾಯಿತು. ಖಾಂಡಿಕ್ಯನ ಗಂಭೀರ ಮುಖಮುದ್ರೆಯನ್ನು ಕಂಡ ಕೇಶಿಧ್ವಜನಿಗೆ ಅವನ ಮನದ ಅರಿವಾಯಿತು.

"ಸಹೋದರನೆ, ನಿನ್ನನ್ನು ಕೊಲ್ಲಲು ಬಂದುದಿಲ್ಲ. ನಾನು ಗುರುದಕ್ಷಿಣೆಯನ್ನು ನೀಡಲು ಬಂದಿದ್ದೇನೆ. ನೀನು ಏನನ್ನು ಅಪೇಕ್ಷಿಸುವೆಯೋ ಅದನ್ನು ಕೊಡಲು ಸಿದ್ಧನಿದ್ದೇನೆ''ಎಂದು ವಿನಯದಿಂದ ಕೇಳಿಕೊಂಡನು. ಖಾಂಡಿಕ್ಯನ ಮಂತ್ರಿಗಳು ಇದನ್ನು ಕೇಳಿ ಹೀಗೆ ಹೇಳಿದರು, "ಅಯ್ಯಾ ಖಾಂಡಿಕ್ಯರಾಜನೇ, ನಮ್ಮ ಕಡೆಯ ಸೈನಿಕರಿಗೆ ಯಾವ ರಕ್ತಪಾತವೂ ಆಗದಂತೆ ನಮಗೆ ಸಾಮ್ರಾಜ್ಯ ದೊರಕುವಂತಹ ಹಂಚಿಕೆ ಮಾಡು. ಅವನ ಸಾಮ್ರಾಜ್ಯವನ್ನೇ ಗುರುದಕ್ಷಿಣೆಯಾಗಿ ಬೇಡು."

ಆದರೆ ಖಾಂಡಿಕ್ಯನು ಕೇಶಿಧ್ವಜನನ್ನು ಇಂತೆಂದು ಪ್ರಾರ್ಥಿಸಿದನು, "ಅಯ್ಯಾ ಸಹೋದರ, ನಾನು ಕರ್ಮಮಾರ್ಗದಲ್ಲಿ ನಂಬಿಕೆ ಉಳ್ಳವನು. ನೀನು ಆಧ್ಯಾತ್ಮಿಕತೆಯ ಜ್ಞಾನಿಯಾಗಿರುವೆ. ಸರ್ವಕ್ಲೇಶಮಾಲಿನ್ಯವನ್ನೂ ಕಳೆಯುವ ಜ್ಞಾನಮಾರ್ಗದ ಉಪದೇಶವನ್ನು ನಮಗೆ ನೀಡು'' ಎಂದು ಬೇಡಿಕೊಂಡನು. ಅವನ ಜ್ಞಾನಪಿಪಾಸೆಯನ್ನು ಕಂಡು ಕೇಶಿಧ್ವಜನು ಸಂತಸಭರಿತನಾಗಿ ಉಪದೇಶಮಾಡಿದನು. ಆ ಮೂಲಕ ತಮ್ಮೀರ್ವರಲ್ಲಿದ್ದ ಪರಸ್ಪರ ವೈಷಮ್ಯಗಳನ್ನು ಕಳೆದುಕೊಂಡು ಜ್ಞಾನಮಾರ್ಗ, ಕರ್ಮಮಾರ್ಗಗಳೆರಡರ ಸಂಯೋಗವಾಗುವಂತೆ ನಡೆದುಕೊಂಡರು.

———



# ಚಿತ್ರಸಮಾರಾಧನಂ

ಮುಳಬಾಗಿಲಿನ ನರಸಿಂಹತೀರ್ಥದಲ್ಲಿ ನಡೆದ ಶ್ರೀಪಾದರಾಜರ ಆರಾಧನಾ ಸಮಾರಂಭದಲ್ಲಿ ನಡೆದ ಹಲವಾರು ಕಾರ್ಯಕ್ರಮಗಳನ್ನು ಇಲ್ಲಿ ಈ ವಿಧವಾಗಿ ಜೋಡಿಸಲಾಗಿದೆ.

ಮೇಲಿನ ಚಿತ್ರ: ಸರ್ವಶ್ರೀ

1. ಶ್ರೀನಿವಾಸದಾಸರು (ಶಿವಮೊಗ್ಗ)
2. ಜಯತೀರ್ಥಾಚಾರ್ಯರು.
3. ಭದ್ರಗಿರಿ ಅಚ್ಯುತದಾಸರು.
4. ಖೇಡ ಕೃಷ್ಣಾಚಾರ್ಯರು.

ಕೆಳಗಡೆ: ವಿವಿಧ ಭಜನಗಾನಗೋಷ್ಠಿಗಳು.

1. ಗುರುಜಗನ್ನಾಥದಾಸ ಸೇವಾಸಮಿತಿ (ಕೌತಾಳ.) ಇಲ್ಲಿ ಬಲಗಡೆಯ ಕೊನೆಗೆ ತಲ್ಲೀನರಾಗಿ ದಾಸಸಾಹಿತ್ಯ ಪ್ರಾಜೆಕ್ಟ್‌ನ ಶ್ರೀ ಕೆ. ಅಪ್ಪಣ್ಣಾಚಾರ್ಯ.

2. ಬೆಂಗಳೂರಿನ ಅಂಬಾ ಭಜನ ಮಂಡಳಿಯ ಮಹಿಳಾ ಸದಸ್ಯೆಯರು.

3. ಶ್ರೀ ವೆಂಕಟೇಶ್ವರ ಕಲಾಪೀಠದ ಸಂಗೀತ ವಿಭಾಗದ ಶ್ರೀ ಬಾಲಸುಬ್ರಹ್ಮಣ್ಯ ಶರ್ಮ ಮತ್ತು ವೃಂದದವರು.



# ವಾರ್ತಾಲಹರಿ (ಮುಂದುವರೆದದ್ದು)

## ಶ್ರೀನಿವಾಸ ಮಂಗಾಪುರದಲ್ಲಿ ರೇಲುವೆ ನಿಲ್ದಾಣ

ತಿರುಪತಿಯಿಂದ ಮದನಪಲ್ಲಿಗೆ ಹೋಗುವ ಮಾರ್ಗದಲ್ಲಿರುವ ಶ್ರೀನಿವಾಸ ಮಂಗಾಪುರದಲ್ಲಿ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯವಿದೆ. ತಿರುಮಲೆ ಬೆಟ್ಟಕ್ಕೆ ನಡೆದು ಹೋಗಲು ಇರುವ ಮೆಟ್ಟಿಲಿನ ಹಾದಿಯ ಆರಂಭಸ್ಥಳ 'ಶ್ರೀವಾರಿ ಮೆಟ್ಟು' ಎಗೆ ಈ ದೇವಾಲಯದ ಮೂಲಕವೇ ಹಾದು ಹೋಗಬೇಕು. ಶ್ರೀನಿವಾಸನು ಪದ್ಮಾವತಿಯನ್ನು ವಿವಾಹವಾದ ಬಳಿಕ ಆರು ತಿಂಗಳ ಕಾಲ ಇಲ್ಲಿ ಇದ್ದು ಈ ಹಾದಿಯಲ್ಲೇ ಬೆಟ್ಟವನ್ನು ಸೇರಿದನೆಂದು ಪ್ರತೀತಿ. ಇಂತಹ ಪವಿತ್ರ ಸ್ಥಳಕ್ಕೆ ತಿರುಪತಿಯಿಂದಲೂ ಚಂದ್ರಗಿರಿಯಿಂದಲೂ ಈ ಮೊದಲು ಬಸ್ ಸೌಕರ್ಯ ಮಾತ್ರವಿದ್ದಿತು. ಈ ಸ್ಥಳದಲ್ಲಿ ಇದೀಗ ರೇಲುವೆ ಸ್ಟೇಷನ್ ಸಹ ಆಗಿದೆ. ತಿರುಪತಿಯಿಂದ ದಿನಕ್ಕೆರಡುಬಾರಿ ಯಾತ್ರಿಕರನ್ನು ಶ್ರೀನಿವಾಸ ಮಂಗಾಪುರಕ್ಕೆ ಒಯ್ಯುವ ಸೌಲಭ್ಯಕ್ಕೆ ನಾಂದಿಯಾದ ಈ ರೇಲುವೆ ಸ್ಟೇಷನ್‌ನ ಉದ್ಘಾಟನಾ ಸಮಾರಂಭದಲ್ಲಿ ಮಾತನಾಡುತ್ತ ಕಾರ್ಯನಿರ್ವಹಣಾಧಿಕಾರಿ ಪಿ. ವಿ. ಆರ್. ಕೆ. ಪ್ರಸಾದರು ದಕ್ಷಿಣ ಮಧ್ಯ ರೇಲುವೆಗೆ ತಮ್ಮ ಕೃತಜ್ಞತೆಯನ್ನು ಅರ್ಪಿಸಿದರು.

## ತಿರುಪತಿಯ ರೇಲುವೆ ನಿಲ್ದಾಣದ ನವೀಕರಣ

ಭಾರತದ ಎಲ್ಲ ಮೂಲೆಗಳಿಂದಲೂ ತಿರುಮಲೇಶನತ್ತ ಕೇಂದ್ರೀಕೃತವಾಗುವ ರೇಲುವೆ ಚಕ್ರಾರ ಪಂಕ್ತಿಯಂತಹ ಯಾತ್ರಿಕ ಸಮುದಾಯಕ್ಕೆ ಎಂದಿಗಿಂತಲೂ ಹೆಚ್ಚು ಅನುಕೂಲಗಳನ್ನು ಕಲ್ಪಿಸಲು ಇಲ್ಲಿನ ನಿಲ್ದಾಣವನ್ನು ನವೀಕರಣಗೊಳಿಸಲಾಗಿದೆ. ದಿನಾಂಕ 29 ಜೂನ್ ರಂದು ಈ ನವೀಕರಣವನ್ನು ಉದ್ಘಾಟಿಸುತ್ತ ಆಂಧ್ರದ ಮುಖ್ಯಮಂತ್ರಿ ಶ್ರೀ ಅಂಜಯ್ಯನವರು ತಿರುಪತಿಗೆ ಇನ್ನೂ ಹೆಚ್ಚಿನ ರೈಲುಗಳ ಅಗತ್ಯವಿದೆ ಎಂದು ತಿಳಿಸಿದರು. ಈ ಹೊಸ ರೈಲ್ವೆ ನಿಲ್ದಾಣದಲ್ಲಿ ಈಗ ಹೊಸದಾದ ಉಪಹಾರ ಗೃಹ, ಕಾಯ್ದಿರಿಸುವ ಹೊಸ ಪದ್ಧತಿಗಳು ವಿಚಾರಣಾ ವ್ಯವಸ್ಥೆ ಹಾಗೂ ಕಾಯುವ ಕೋಣೆಗಳು ಹೊಸ ರೀತಿಯಲ್ಲಿ ವಿನ್ಯಾಸಗೊಂಡಿವೆ.

## ಕರ್ನಾಟಕದಲ್ಲಿ......

### "ಧರ್ಮಕ್ಕೆ ಸಮಯವನ್ನು ನೀಡಿ"

ಶಿಡ್ಲಗಟ್ಟದಲ್ಲಿ ಇತ್ತೀಚೆಗೆ ನಡೆದ ಧಾರ್ಮಿಕ ಸಮಾರಂಭದಲ್ಲಿ ಬೆಳಗಾವಿಯ ಬೈಲಹೊಂಗಲದ ಸ್ವಾಮಿ ಶ್ರೀ ವಿಜಯಾನಂದರು, ದೇಶದಲ್ಲಿನ ಧಾರ್ಮಿಕ ಪ್ರವೃತ್ತಿಗಳನ್ನು ನಿರ್ದಿಷ್ಟ ಕಾರ್ಯಕ್ರಮಗಳ ಮೂಲಕ ಒಂದು ಸೂತ್ರಕ್ಕೆ ತಂದು ಜನತೆಯ ಧಾರ್ಮಿಕ ಅನಾಸಕ್ತಿಯನ್ನು ಹೋಗಲಾಡಿಸಿ ವಿಧರ್ಮೀಯರ ಆಕ್ರಮಣದಿಂದ ಧರ್ಮವನ್ನು ರಕ್ಷಿಸಲು ಕಾರ್ಯನಿರತರಾಗಬೇಕಾದ ಅವಶ್ಯಕತೆ ಈಗ ಹೆಚ್ಚಾಗಿದ್ದು, 'ಪ್ರತಿಯೊಬ್ಬರೂ ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಧಾರ್ಮಿಕತೆಗೆ ಸಮಯ ನೀಡುವಂತೆ' ಕರೆ ನೀಡಿದರು. ಹಿಂದೂಧರ್ಮ ರಕ್ಷಣಾ ಸಂಸ್ಥೆಯ ಗೌರವ ಪ್ರತಿನಿಧಿ ಶ್ರೀ ಗೋಖಲೆ ಸುಬ್ಬರಾಮಯ್ಯ ಮತ್ತು ವಿಶ್ವ ಹಿಂದೂ ಪರಿಷತ್ತಿನ ಅಧ್ಯಕ್ಷ ಶ್ರೀ ಬಿ.ಎನ್. ಪಿಳ್ಳೈಯ್ಯನವರುಗಳು, ಹಿಂದೂಧರ್ಮ ರಕ್ಷಣೆಗಾಗಿ ನಡೆಯುತ್ತಿರುವ ಚಟುವಟಿಕೆಗಳ ವಿವರಗಳನ್ನು ಸಭಿಕರಿಗೆ ತಿಳಿಸಿ ಸರ್ವರ ಸಕ್ರಿಯ ಸಹಕಾರವನ್ನು ಕೋರಿದರು. ಶ್ರೀ ರಮೇಶ್‌ರಿಂದ ಪರಿಚಯ ಹಾಗೂ ಶ್ರೀ ಅಯ್ಯರ್‌ರವರಿಂದ ವಂದನಾರ್ಪಣೆಯಾದ ನಂತರ ಮಂಗಳವಾದ್ಯ – ಭಜನೆ – ಜಯ ಘೋಷಗಳೊಡನೆ ಸ್ವಾಮೀಜಿಯವರನ್ನು ಬೀಳ್ಕೊಡಲಾಯ್ತು.

### ಧರ್ಮಪರಾವರ್ತನ

ಹಿಂದೂ ಧರ್ಮದ ಉತ್ತಮ ಮೌಲ್ಯಗಳನ್ನು ಹೊಂದಿ ಜೀವನವನ್ನು ನಡೆಸುವ ಅಪೇಕ್ಷೆಯಿಂದ ಹಿಂದೂಧರ್ಮಕ್ಕೆ ಹಿಂದಿರುಗುವ ಅಪೇಕ್ಷೆ ಹೊಂದಿದ ತರುಣಿ ರೀಟಾ ಅವರ ಧರ್ಮಪರಾವರ್ತನ ಕಾರ್ಯಕ್ರಮವು ಕೋಲಾರಜಿಲ್ಲೆಯ ಚಿಂತಾಮಣಿಯಲ್ಲಿ ದಿನಾಂಕ 17 ಜೂನ್ ರಂದು ನಡೆಯಿತು. ವೇ|| ಬ್ರ|| ಕುಮಾರಸ್ವಾಮಿಗಳ ಅಧ್ವರ್ಯದಲ್ಲಿ ನಡೆದ ಈ ಸಮಾರಂಭದಲ್ಲಿ ಪರಾವರ್ತಿತರು ಹಿಂದೂಧರ್ಮ ದೀಕ್ಷೆಯನ್ನು ಕೈಗೊಂಡು 'ದೇವಕೀಗೀತಾ'ಆದರು. ಕೇಂದ್ರ ಸರ್ಕಾರಿ ಉದ್ಯೋಗಿ ಶ್ರೀ ನಾಗರಾಜ ಅವರು ಗೀತಾ ಅವರನ್ನು ವಿವಾಹವಾದರು. ಪರಾವರ್ತನೆ ಹಾಗೂ ವಿವಾಹದ ಆರತಕ್ಷತೆಗೆ ಚಿಂತಾಮಣಿ, ಕೆ. ಜಿ. ಎಫ್, ಕೋಲಾರದ ವಿಶ್ವಹಿಂದೂ ಪರಿಷತ್ ಕಾರ್ಯಕರ್ತರು ಆಗಮಿಸಿ ನೂತನ ವಧೂವರರನ್ನು ಆಶೀರ್ವದಿಸಿದರು.

## ಪುಸ್ತಕ ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳ ಹಿಂದೂ ಧರ್ಮಪ್ರಸಾರದ ಕಾರ್ಯಕ್ರಮದಲ್ಲಿ ಹೊಸದಾಗಿ ಐದು ಪುಸ್ತಕಗಳ ಪ್ರಕಟನೆಯಾಯಿತು. ಭಾರತೀಯ ತತ್ತ್ವಶಾಸ್ತ್ರಮು (ಮೂಲ: ಡಾ || ರಾಧಾಕೃಷ್ಣನ್ ಎಸ್.) ಮಹರ್ಷುಲ ಕಥಲು, ಶ್ರೀಸೂಕ್ತಮು ಶ್ರೀ ಎಕ್ಕಿರಾಲ, ಷೋಡಶಿ ರಾಮಾಯಣ ರಹಸ್ಯಮುಲು (ಗುಂಟೂರು ಶೇಷೇಂದ್ರ ಶರ್ಮ) ನಾದ ಯೋಗಿ ತ್ಯಾಗಯ್ಯ (ತಿರುಮೂರು ಸುಧಾಕರರೆಡ್ಡಿ) ಈ ತೆಲುಗು ಪುಸ್ತಕಗಳನ್ನು ದಿನಾಂಕ 29—6—81 ರಂದು ಬಿಡುಗಡೆ ಮಾಡಿದ ಮುಖ್ಯಮಂತ್ರಿ ಶ್ರೀ ಅಂಜಯ್ಯನವರ ಒಳ್ಳೆಯ ಕೆಲಸ ಮಾಡುತ್ತಿರುವ ತಿ.ತಿ. ದೇವಸ್ಥಾನಗಳನ್ನು ಅಭಿನಂದಿಸಿದರು.

1—8—81 ರಿಂದ
31—8—81 ವರೆಗೆ

# ನಿಮ್ಮ ಭವಿಷ್ಯ

ಡಾ॥ ಅರ್ಕಸೋಮಯಾಜಿ.



## ಮೇಷ :

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

23ರ ಮೊದಲು ಧನ ಹಾಗೂ ಯಶಸ್ಸು. 13ರ ಮೊದಲು ಉತ್ತಮ ಕಾಲ. ಗೃಹಕಲಹ ವುಂಟಾಗಬಹುದು. 23ರ ನಂತರ ಉದರ ಬಾಧೆ. 13ರ ಮೊದಲು ಬಂಧುಗಳ ಆಗಮನ ಹಾಗೂ ಹಿರಿಯರ ಪ್ರಶಂಸೆ. 13ರ ನಂತರ ದುಷ್ಟ ಸಹವಾಸದಿಂದಾಗಿ ತುಸು ಅಗೌರವ. ಆಗಾಗ ಚಿತ್ತಶಾಂತಿ ನಾಶ. ಒಟ್ಟಿನಲ್ಲಿ ಸಾಧಾರಣ ತಿಂಗಳು.

ಅಶ್ವಿನಿ ನಕ್ಷತ್ರದವರಿಗೆ 5, 7, 14, 15, 17.
ಭರಣಿ ನಕ್ಷತ್ರದವರಿಗೆ 4, 6, 8, 16, 18.
ಕೃತ್ತಿಕೆ ಮೊದಲ ಪಾದದವರಿಗೆ
5, 7, 15, 17. ಒಳಿತಿನ ದಿನಗಳು.



## ವೃಷಭ :

(ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ಧನಲಾಭವಿದ್ದರೂ ಅಧಿಕ ವೆಚ್ಚ. ಮಕ್ಕಳ ಮೂಲಕ ತುಸುಚಿಂತೆ. 23ರ ಮುನ್ನ ವಿವಾದ ಅಥವಾ ಅಧಿಕೃತಚಿಂತೆ ಅಥವಾ ತುಸು ಅನಾರೋಗ್ಯ ಅಥವಾ ಮನೆಯಲ್ಲಿ ಕಳ್ಳತನ. ನಂತರ ಅಕ್ರಮವಾಗಿ ಧನಲಾಭ. ಸ್ನೇಹಲಾಭವಾದರೂ ಪಾಪ ಪ್ರವರ್ತನೆ. 13ರ ನಂತರ ಬಂಧುಗಳ ಆಗಮನ, ಹಿರಿಯರ ಪ್ರಶಂಸೆ.

ಕೃತ್ತಿಕೆ 2, 3, 4 ಪಾದದವರಿಗೆ
2, 7, 9, 17, 18, 19,
ರೋಹಿಣಿ ನಕ್ಷತ್ರದವರಿಗೆ 6, 8, 10, 16, 18,
ಮೃಗಶಿರ 1, 2 ಪಾದದವರಿಗೆ 7, 9, 17, 18, 19 ಒಳಿತಿನ ದಿನಗಳು.



## ಮಿಥುನ :

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ಬಂಧುಗಳ ಮೂಲಕ ತೊಂದರೆ ಅಥವಾ ವಿವಾದ ಅಥವಾ ಆಪ್ತರಿಂದ ಬೇರ್ಪಡೆ ಅಥವಾ ಸ್ನೇಹಿತರಿಂದ ಬೇರ್ಪಡೆ, 23ರ ನಂತರ ಮನೆಯಲ್ಲಿ ಕಳ್ಳತನವಾಗಬಹುದು. 13ರ ನಂತರ ಅಧಾರ್ಮಿಕ ಪ್ರವೃತ್ತಿ ಹಾಗೂ ವಸ್ತ್ರಲಾಭ. 17ರ ನಂತರ ಒಳಿತು.

ಮೃಗಶಿರ 3, 4 ಪಾದದವರಿಗೆ
2, 9, 18, 19 20
ಆರ್ದ್ರಾ ನಕ್ಷತ್ರದವರಿಗೆ3, 10, 19, 20, 21,
ಪುನರ್ವಸು 1, 2, 3 ಪಾದದವರಿಗೆ
2, 9, 18, 19, 20 ಒಳಿತಿನ ದಿನಗಳು.



## ಕರ್ಕಾಟಕ :

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

23ರ ಮೊದಲು ನೇತ್ರಬಾಧೆ ಅಥವಾ ಹೆಂಡತಿಯ ಅತೃಪ್ತಿ ಆಗಬಹುದು. ಪ್ರಯಾಣ ಅಥವಾ ತುಸು ಉದರಬಾಧೆ ಸೂಚಿತವಾಗಿದೆ. ಹೊಸ ಉಡುಪು, ಅಧಿಕೃತ ಗೌರವ. ಧನಲಾಭ ಆದರೂ ವ್ಯಯವೂ ಹೆಚ್ಚು.

ಪುನರ್ವಸು 4ನೇ ಪಾದದವರಿಗೆ
4, 11, 20, 22, 23,
ಆಶ್ಲೇಷಾ ನಕ್ಷತ್ರದವರಿಗೆ
12, 20, 22, 24 ಒಳಿತನ ದಿನಗಳು.



## ಸಿಂಹ :

(ಮಖ, ಪೂರ್ವ ಫಾಲ್ಗುಣ ಉತ್ತರ 1 ನೇ ಪಾದ:)

ಪ್ರಣಯಭಾವ. 17ರ ನಂತರ ಪ್ರಯಾಣ ಅಥವಾ ಉದರಬಾಧೆ. 23ರ ಮೊದಲು ಧನ ಲಾಭ, ಯಶಸ್ಸು. 13ರ ನಂತರ ಅಧಿಕೃತ ಗೌರವ ಗೃಹಸಂಪದಭಿವೃದ್ಧಿ ಅಥವಾ ಸಂತಾನ.

ಮಖಾ ನಕ್ಷತ್ರದವರಿಗೆ
3, 7, 15, 17, 23,
ಪುಬ್ಬಾ ನಕ್ಷತ್ರದವರಿಗೆ 4, 6, 16, 24, 26,
ಒಳಿತಿನ ದಿನಗಳು.



## ಕನ್ಯಾ :

(ಉತ್ತರ 2,3,4, ಪಾದ, ಹಸ್ತ, ಚಿತ್ತ 1,2 ಪಾದ)

ಧನಲಾಭವಿದ್ದರೂ ಚಿತ್ತಶಾಂತಿಯಿರದು. ಪ್ರಯಾಣ ಹಾಗೂ ಪ್ರಯಾಸ. ಆಪ್ತರಿಂದ ಬೇರ್ಪಡೆ ಮಕ್ಕಳೊಂದಿಗೆ ವಿವಾದ ಸೂಚಿತ ವಾಗಿವೆ. 13ರ ನಂತರ ಚಿತ್ತ ಶಾಂತಿ. ಆಗಾಗ ವಿವಾದ.

ಉತ್ತರ 2, 3, 4 ಪಾದದವರಿಗೆ
5, 9, 17, 18, 19, 27,
ಹಸ್ತ ನಕ್ಷತ್ರದವರಿಗೆ 10, 19, 24, 27,
ಚಿತ್ತಾ 1, 2 ಪಾದದವರಿಗೆ
9, 17, 18, 19, 27 ಒಳಿತಿನ ದಿನಗಳು.



## ತುಲಾ :

(ಚಿತ್ತ 3,4ಪಾದ, ಸ್ವಾತಿ, ವಿಶಾಖಾ1,2,3 ಪಾದ)

ಆಗಾಗ ಪ್ರಯಾಣ, ಧನಲಾಭ, ಸ್ನೇಹ

ಲಾಭ, 23 ನಂತರ ಪ್ರಣಯಭಾವ, ಯಶಸ್ಸು ಸೂಚಿತವಾಗಿದೆ. ಹೊಸ ಉಡುಪು.

ಚಿತ್ತ 3, 4 ಪಾದದವರಿಗೆ
2, 7, 11, 18, 19, 20, 27,

ಸ್ವಾತಿ ನಕ್ಷತ್ರದವರಿಗೆ 3, 8, 13, 19, 20, 26, ಒಳಿತಿನ ದಿನಗಳು.



## ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಧನಲಾಭ ಹಾಗೂ ಪ್ರಣಯಭಾವ ಇದ್ದರೂ ಪಾಪಪ್ರವರ್ತನೆ. 17ರ ನಂತರ ಒಳಿತು. ವಸ್ತ್ರಲಾಭ ಆದರೆ ಶರೀರ ಘಾತ.

ವಿಶಾಖ 4ನೇ ಪಾದದವರಿಗೆ
2, 4, 13, 15, 20, 24, 29,

ಅನುರಾಧ ನಕ್ಷತ್ರದವರಿಗೆ
3, 5, 12, 15, 20, 23,

ಜ್ಯೇಷ್ಠಾ ನಕ್ಷತ್ರದವರಿಗೆ 2, 4, 9, 15, 23 ಒಳಿತಿನ ದಿನಗಳು.



## ಧನುಸ್ಸು :

(ಮೂಲ, ಪೂ. ಉ. 1 ನೇ ಪಾದ)

23ರ ವರೆಗೆ ಹೆಂಡತಿಯೊಡನೆ ವಿವಾದ ಅಥವಾ ನೇತ್ರ ಭಾದೆ ಅಥವಾ ಉದರಭಾದೆ. 18ರ ನಂತರ ವಿವಾದ ಅಥವಾ ಧನನಷ್ಟ ಸೂಚಿತವಾಗಿದೆ. ಈ ತಿಂಗಳು ಈ ರಾಶಿಯವರಿಗೆ ಪ್ರೋತ್ಸಾಯದಾಯಕ. ರುದ್ರಾಭಿಷೇಕ ಮಾಡಿಸುವುದು ಉತ್ತಮ.

ಮೂಲಾ ನಕ್ಷತ್ರದವರಿಗೆ
5, 7, 12, 17, 23, 25,

ಪೂರ್ವಾಷಾಢದವರಿಗೆ
2, 4, 6, 12, 17, 23,

ಉತ್ತರಾಷಾಢದ ಮೊದಲಪಾದದವರಿಗೆ
5, 7, 11, 17, 23 ಒಳಿತಿನ ದಿನಗಳು.



## ಮಕರ :

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

ಈ ರಾಶಿಯವರಿಗೆ ಧನಲಾಭವಿದ್ದರೂ ಪಾಪ ಪ್ರವರ್ತನೆ ಸೂಚಿತವಾಗಿದೆ. ವಿವಾದಗಳುಂಟಾಗುವುದು. 23ರ ವರೆಗೆ ಒಳಿತಿನ ಕಾಲ. 17ರ ಮೊದಲು ಉದರಬಾಧೆ ಅಥವಾ ಪ್ರಯಾಣ. ನಂತರ ಹೆಂಡತಿಯ ಅತೃಪ್ತಿ.

ಉತ್ತರಾಷಾಢದ 2, 3, 4 ಪಾದದವರಿಗೆ 7, 9, 14, 18ರ ಸಂಜೆ, 19ರ ಬೆಳಗ್ಗೆ 25, 27

ಶ್ರವಣ ನಕ್ಷತ್ರದವರಿಗೆ 6, 12ರ ಮಧ್ಯಾಹ್ನ, 15ರ ಮಧ್ಯಾಹ್ನ, 18, 26

ಧನಿಷ್ಠ 1, 2 ಪಾದದವರಿಗೆ 2, 7, 18, 19, 23, 27 ಒಳಿತಿನ ದಿನಗಳು.



## ಕುಂಭ :

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

17ರ ನಂತರ ಪ್ರಯಾಣ ಅಥವಾ ಅಹಿತಕರವಾದ ಅನಾರೋಗ್ಯ ಸೂಚಿತ. ಆಪ್ತರಿಂದ ಬೇರ್ಪಡೆ ಅಥವಾ ಉತ್ಸಾಹನಾಶ. ಸ್ತ್ರೀಯರ ಮೂಲಕ ಬಹುಶಃ ತೊಂದರೆ. ಮೊದಲ ಹದಿನೈದುದಿನಗಳಲ್ಲಿ ಉತ್ತಮ ಕಾಲ. 23ರ ಮುನ್ನ ಮಕ್ಕಳ ಮೂಲಕ ತುಸು ಚಿಂತೆ.

ಧನಿಷ್ಠ 3, 4 ಪಾದದವರಿಗೆ 2, 9, 17,

ಶತಭಿಷಾ ನಕ್ಷತ್ರದವರಿಗೆ 3, 10, 17, 26

ಪೂರ್ವಾಭಾದ್ರ 1, 2, 3 ಪಾದದವರಿಗೆ 2, 9, 11, 17, 20, 27 ಒಳಿತಿನ ದಿನಗಳು.



## ಮೀನ :

(ಪೂ. ಭಾ. 4 ನೇ ಪಾದ ಉ. ಭಾ. ರೇವತಿ)

ಪ್ರಯಾಣ ಹಾಗೂ ಪ್ರಣಯ ಸೂಚಿತ. 23ರ ಮೊದಲು ಉದರಭಾದೆ. ನಂತರ ಮಕ್ಕಳ ಮೂಲಕ ತುಸು ಚಿಂತೆ. 13ರ ಮೊದಲಿಗೆ ಹೆಂಡತಿ ಅಥವಾ ಗಂಡು ಮಕ್ಕಳೊಡನೆ ವಿವಾದ ; ನಂತರ ಉತ್ತಮಕಾಲವಾದರೂ ಸ್ತ್ರೀಯರ ಮೂಲಕ ತೊಂದರೆ.

ಪೂರ್ವಾಭಾದ್ರ 4ನೇ ಪಾದದವರಿಗೆ
2, 4, 13, 16, 18, 19, 29,

ಉತ್ತರಾಭಾದ್ರ ನಕ್ಷತ್ರದವರಿಗೆ
3, 5, 14, 19, 23,

ರೇವತಿ ನಕ್ಷತ್ರದವರಿಗೆ 2, 4, 11, 13, 20, 29, ಒಳಿತಿನ ದಿನಗಳು.

---




4 Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ | ರೂ 200 |
| 2. | ಅಭಿಷೇಕ | ರೂ 500 |
| 3. | ಗಂಬುರ | ರೂ 300 |
| 4. | ಪುನುಗು | ರೂ 200 |
| 5. | ಜಾಫ್ರಾ | ರೂ 100 |
| 6. | ಕಸ್ತೂರಿ | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 2500 |
| 8. | ತಿರುಪ್ಪಾವಡಾ | ರೂ 5000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 1745 |
| 10. | ಮುಕುರ ಮಂಟಪದಲ್ಲಿ ಡೋಲೋತ್ಸವ | ರೂ 1000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 2500 |
| ಕಲ್ಯಾಣೋತ್ಸವ | ರೂ 1500 |
| ಬ್ರಹ್ಮೋತ್ಸವ | ರೂ 750 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

* ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

ವಿವರಗಳಿಗೆ :

**ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

ಪ್ರವಾಸಿ ಮಂದಿರದ ಸಮೀಪದ ವಸತಿಗೃಹಗಳು :

| | | |
|---|---|---|
| ಎ. ಟಿ. ಸಿ | ದಿನವೊಂದಕ್ಕೆ | ರೂ 25–00 |
| | ½ ಕಾಟೇಜು 'ಎ' ಭಾಗ | ರೂ 15–00 |
| | ½ ಕಾಟೇಜು 'ಬಿ' ಭಾಗ | ರೂ 10–00 |
| ಪ್ರವಾಸಿಮಂದಿರ ಮೂರನೆಯಸಾಲು | | |
| | ಹೀಟರಿನ ಸೌಲಭ್ಯ ಇರುವುದು | ರೂ 12–00 |
| | ಇಲ್ಲದವು | ರೂ 10–00 |
| ಹಿಲ್ ವ್ಯೂ ಡೀಲಕ್ಸ್ ಕಾಟೇಜುಗಳು | | ರೂ 20–00 |
| ಹಿಲ್ ವ್ಯೂ ಗೆಸ್ಟ್ ಹೌಸ್ ದೊಡ್ಡ ಕಾಟೇಜು | | ರೂ 40–00 |
| | ಕಿರಿಯ ಕಾಟೇಜು | ರೂ 20–00 |
| ಹಿಲ್ ವ್ಯೂ ಕಾಟೇಜುಗಳು | | ರೂ 10–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 15–00 |
| ಶೇಷಾದ್ರಿನಗರ ,, | ,, | ರೂ 15–00 |
| ಅಂಜನಾದ್ರಿನಗರ ,, | ,, | ರೂ 15–00 |
| ಗರುಡಾದ್ರಿನಗರ ,, | ,, | ರೂ 15–00 |
| ವಿವಾಹದ ಕಾಟೇಜುಗಳು ದಿನಂಪ್ರತಿ | | ರೂ 30–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | | |
|---|---|---|
| ಶ್ರೀನಿವಾಸ ಸತ್ರ | ಎರಡು ಹಾಸಿಗೆಗಳ ಕೋಣೆ | ರೂ 12–00 |
| | ನಾಲ್ಕು ,, | ರೂ 15–00 |
| | ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | | |
| | ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| | ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | | |
| | ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲ ತಿರುಪತಿ ದೇವಸ್ಥಾನ.

# ಶ್ರೀ ವೇಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಆರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :– 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ಅರ್ಚನೆ, ತೋಮಾಲಸೇವೆ, ಅಭಿಷೇಕ ಸಮಯಗಳಲ್ಲಿ ಅಭಿಷೇಕಾನಂತರ ದರ್ಶನ ಟಿಕೆಟ್ಟುಗಳಾಗಲಿ, ವಿಶೇಷ ದರ್ಶನದ ಟಿಕೆಟ್ಟುಗಳಾಗಲಿ ಅನುಮತಿಸಲ್ಪಡುವುದಿಲ್ಲ. ಸರ್ವದರ್ಶನ ಸಮಯದಲ್ಲಿ ರೂ. 25/– ಟಿಕೆಟ್ಟುಗಳವರೂ ಸಹ ಅನುಮತಿಸಲ್ಪಡುವರು.

3. ಆಮಂತ್ರಣೋತ್ಸವದ ರೂ 200/– ಟಿಕೆಟ್ಟು ಮೇಲೆ ಐವರಿಗೆ ಬದಲಾಗಿ ಇಬ್ಬರು ಮಾತ್ರವೇ ಅನುಮತಿಸಲ್ಪಡುವರು.

4. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 7–00 ನಡುವೆ ಜರುಗುವುವು.



ಹರಪುತ್ರ ಸುರನಾಥ ಗಣೇಶ ।
ಗಿರಿರಾಜಸುತಾ ತನಯು ಗಣೇಶ ॥
ಗಜಮುಖ ಸುರವರ ದೇವ ಗಣೇಶ ।
ತ್ರಿಜಗಾಧಿಪ ಪದ ವಂದ್ಯ ಗಣೇಶ ॥
ಅಷ್ಟ ಸಿದ್ಧಿಗಳ ಈವ ಗಣೇಶ ।
ಕಷ್ಟದುಃಖ ಹರ ಮೂರ್ತಿ ಗಣೇಶ ॥
ವಿಘ್ನಹರನೆ ಪೊರೆ ಎಮ್ಮ ಗಣೇಶ ।
ಪ್ರಜ್ಞಾದಾತ ಶುಭ ಚರಿತ ಗಣೇಶ ॥

ಚಿತ್ರ : ಸೋಮಶೇಖರ್

# ತಿ. ತಿ. ದೇವಸ್ಥಾನಗಳು, ತಿರುಪತಿ.



## ಒಂದು ಹಕ್ಕಿನೋಟ

1. ದೇವಸ್ಥಾನಗಳು 42

2. ಸ್ಥಳಾವಕಾಶ
   - ಅ) ಉಚಿತ ಕೊಠಡಿಗಳು (ಸತ್ರಗಳು) 9 (1285)
   - ಆ) ಬಾಡಿಗೆ ಕೋಣೆಗಳು, ಮನೆಗಳು 891
   - ಇ) ಅತಿಥಿ ಗೃಹಗಳು 9

3. ಫಲಾಹಾರ ಮಂದಿರಗಳು 10

4. ಆಸ್ಪತ್ರೆಗಳು 8

5. ಶೈಕ್ಷಣಿಕ ಸಂಸ್ಥೆಗಳು
   - ಅ) ಸಂಸ್ಕೃತ ಹಾಗೂ ಧಾರ್ಮಿಕ 5
   - ಆ) ಕಲಾ, ವಿಜ್ಞಾನ ಕಾಲೇಜುಗಳು 5
   - ಇ) ಸಾಂಸ್ಕೃತಿಕ ಹಾಗೂ ತಾಂತ್ರಿಕ 5
   - ಈ) ಶಾಲೆಗಳು 8

6. ದತ್ತಿ ಸಂಸ್ಥೆಗಳು 3

7. ಉದ್ಯಾನವನ ಹಾಗೂ ಪುಷ್ಪವಾಟಿಕೆಗಳು 28 (312 ಎಕರೆ)

8. ಹಯನೋತ್ಪಾದನೆ
   - ಅ) ಜಾನುವಾರು ಸಂಖ್ಯೆ 392
   - ಆ) ಬೇಸಾಯದ ಭೂಮಿ ಎಕರೆ 116
   - ಬೀಡು ಭೂಮಿ " 147

9. ಕಾನನ ಪ್ರದೇಶ ಎಕರೆ 7160

10. ತೀರ್ಥಗಳು 16

11. ಅಣೆಕಟ್ಟುಗಳು(ಪೂರ್ಣಗೊಂಡದ್ದು, ಕಾಮಗಾರಿಯಲ್ಲಿರುವುದು)2

12. ವಸ್ತು ಸಂಗ್ರಹಾಲಯಗಳು 2

13. ವಿಭಾಗಗಳು 106

14. ಕೆಲಸಗಾರರು (ಎಲ್ಲ ರೀತಿಯವರೂ ಸೇರಿ) 5676

15. ವಾಹನಗಳು 152

16. ಹಿಂದೂಧರ್ಮರಕ್ಷಣ ಸಂಸ್ಥೆಯ ಶಾಖೆಗಳು 17

17. ವಿಚಾರಣಾ ಕೇಂದ್ರಗಳು 17

18. ಕಲ್ಯಾಣ ಮಂಟಪಗಳು 9

19. ಮುದ್ರಣ ಶಾಲೆ 1

20. ಪ್ರಕಟನೆಗಳು 1980–81
   - ಅ) ಮಾಸಪತ್ರಿಕೆ ಸಪ್ತಗಿರಿ (5 ಭಾಷೆಗಳಲ್ಲಿ)
   - ಆ) ವಾರ್ಷಿಕ ಕ್ಯಾಲೆಂಡರ್ ಹಾಗೂ ಪಂಚಾಂಗ
   - ಇ) ಇತರೆ 86

21. ಯಾತ್ರಿಕರ ಸಂಖ್ಯೆ 1980–81 ರಲ್ಲಿ 69,35,172

22. ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಆದಾಯ 1980–81 ರಲ್ಲಿ (ಲಕ್ಷರೂಗಳಲ್ಲಿ)
   - ಅ) ಕಾಣಿಕೆ ರೂ 794.08
   - ಆ) ವಿಶೇಷ ಪ್ರವೇಶ ಟಿಕೆಟ್ ಮಾರಾಟ ರೂ 100.01
   - ಇ) ಆರ್ಜಿತ ಸೇವೆಗಳು ರೂ 246.54
   - ಈ) ಪ್ರಸಾದದ ಮಾರಾಟ ರೂ 236.43

23. ತಿ.ತಿ.ದೇ. ಗಳ ಒಟ್ಟು ಆದಾಯ 1980–81 ರಲ್ಲಿ (ಲಕ್ಷಗಳಲ್ಲಿ) ರೂ 2268.43